# ಮರುಳ ಮುನಿಯನ ಕಗ್ಗ

(ಮಂಕುತಿಮ್ಮನ ಕಗ್ಗ - ಭಾಗ ೨)



# ಮರುಳ ಮುನಿಯನ ಕಗ್ಗ

## ಮಂಕುತಿಮ್ಮನ ಕಗ್ಗ ಭಾಗ 2

ಡಿ. ವಿ. ಜಿ.



ಕಾವ್ಯಾಲಯ : ಪ್ರಕಾಶಕರು : ಜಯನಗರ
ಮೈಸೂರು 570 014

*MARULA MUNIYANA KAGGA*—A collection of Poems by D. V. G. Published by Chidambaram Kudali Krishna Murthy, Kavyalaya Publishers, Jayanagar, Mysore 14.

*Telephone* : 23042 & 27591

NEW EDITION : 1998.



**ಬೆಲೆ : ರೂ. 50**
**ಗ್ರಂಥಾಲಯ ಪ್ರತಿ : ರೂ. 80**

ಮುದ್ರಕರು : ಜಿ. ಎಚ್. ಕೃಷ್ಣಮೂರ್ತಿ
ಮೈಸೂರು ಪ್ರಿಂಟಿಂಗ್ ಪ್ರೆಸ್, ಮೈಸೂರು 570 001

# ಮುನ್ನುಡಿ

ಪೂಜ್ಯ ಡಿ. ವಿ. ಗುಂಡಪ್ಪನವರು ಈ ಕೃತಿಯು ಪ್ರಕಟಣೆಗೆ ಸಿದ್ಧವಾಗುವುದಕ್ಕೆ ಮುಂಚೆಯೇ ದೈವಾಧೀನರಾದರು. ಅನಂತರ ಅವರ ಮಗ ಡಾ|| ಬಿ. ಜಿ. ಎಲ್. ಸ್ವಾಮಿಯವರು ಈ ಕೃತಿಯ ಸಾಮಗ್ರಿ ಎಲ್ಲವನ್ನೂ ಪರಿಷ್ಕರಿಸಿ ಪ್ರಕಟಿಸಬೇಕೆಂದು ಬಯಸಿ ಆ ಪ್ರಯತ್ನದಲ್ಲಿ ತೊಡಗಿದ್ದಾಗಲೇ ಅವರೂ ದುರದೃಷ್ಟವಶಾತ್ ನಿಧನರಾದರು. ಡಿ.ವಿ.ಜಿ.ಯವರ ಗ್ರಂಥಗಳಿಗೆ ಸಂಬಂಧಪಟ್ಟ ಅಧಿಕಾರವು ಬಿ. ಜಿ. ಎಲ್. ಸ್ವಾಮಿಯವರಿಂದ ಅವರ ಧರ್ಮಪತ್ನಿ ಶ್ರೀಮತಿ ವಸಂತಾ ಸ್ವಾಮಿಯವರಿಗೆ ಸೇರಿತು. ಅವರು ಡಿ.ವಿ.ಜಿ. ಯವರ ಗ್ರಂಥಗಳೆಲ್ಲದರ ಪ್ರಕಟಣೆಯ ಅಧಿಕಾರವನ್ನೂ ನಮ್ಮ ಸಂಸ್ಥೆಗೆ ವಹಿಸಿದರು. ಹಾಗೆ ವಹಿಸುವ ಸಂದರ್ಭದಲ್ಲಿ ಅವರು ಈ ರೀತಿ ಹೇಳಿದ್ದಾರೆ: "ದಿವಂಗತ ಪೂಜ್ಯ ಡಿ. ವಿ. ಗುಂಡಪ್ಪನವರು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸಂಸ್ಥಾಪಕರಲ್ಲಿ ಒಬ್ಬರಾಗಿದ್ದು ಅವರ ಕಡೆಯ ಕಾಲದ ವರೆಗೂ ಅದರ ಗೌರವ ಕಾರ್ಯದರ್ಶಿಗಳಾಗಿದ್ದರು... ಅವರು ತಮ್ಮ ಸಾಹಿತ್ಯ ಕೃತಿಗಳಲ್ಲಿನ ಅಧಿಕಾರವೆಲ್ಲವನ್ನೂ ಅವರ ಏಕಮಾತ್ರ ಪುತ್ರರಾದ ಡಾ|| ಬಿ. ಜಿ. ಎಲ್. ಸ್ವಾಮಿಗಳಿಗೆ ತಮ್ಮ ಮರಣ ಶಾಸನ ಪತ್ರದಲ್ಲಿ ವಹಿಸಿದರು. ಡಾ|| ಸ್ವಾಮಿಗಳ ಮರಣದ ನಂತರ ನಾನು ಅವರ ಏಕೈಕ ವಾರಸುದಾರಳಾದೆನು. ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯು ಡಿ.ವಿ.ಜಿ.ಯವರು ಹುಟ್ಟು ಹಾಕಿದ, ಪೋಷಿಸಿ ಬೆಳಸಿದ ಸಂಸ್ಥೆ. ಅವರ ಮಾರ್ಗದರ್ಶನದಲ್ಲಿ ಅದು ನಡೆಸುತ್ತಿದ್ದ ವಿವಿಧ ಚಟುವಟಿಕೆಗಳು ಅವರಿಗೆ ಅತ್ಯಂತ ಪ್ರಿಯವಾಗಿದ್ದವು. ಡಿ.ವಿ.ಜಿ.ಯವರ ಕೃತಿಗಳು

ಮುದ್ರಿತವಾಗಿ, ಅಗತ್ಯವಾದಾಗ ಪುನರ್ಮುದ್ರಿತವಾಗಿ ಆ ಮೂಲಕ ಜ್ಞಾನ ಪ್ರಸಾರವು ವಿಶಾಲವಾದ ರೀತಿಯಲ್ಲಿ ನೆರವೇರ ಬೇಕೆಂಬುದು ಡಾ. ಸ್ವಾಮಿಯವರ ಇಚ್ಛೆಯಾಗಿದ್ದಿತು. ಹಾಗೆಯೇ ನನ್ನದೂ ಅದೇ ಇಚ್ಛೆ. ರೀತಿಯ ಸಾಹಿತ್ಯದ ಚಟುವಟಿಕೆಯೂ ಗೋಖಲೆ ಸಂಸ್ಥೆಯ ಉದ್ದೇಶಗಳಲ್ಲಿ ಒಂದಾಗಿದೆ. ಆದ್ದರಿಂದ ಈ ಪ್ರಚಾರ ಕಾರ್ಯವನ್ನು ಈ ಸಂಸ್ಥೆಗೆ ವಹಿಸುವುದು ಉಚಿತವೇ ಆಗಿದೆ.'' ಈ ರೀತಿ ನಮಗೆ ಒಪ್ಪಿಸಿದ ಜವಾಬ್ದಾರಿಯನ್ನೂ ಅಧಿಕಾರವನ್ನೂ ನಾವು ಅತ್ಯಂತ ಸಂತೋಷದಿಂದ ಸ್ವೀಕರಿಸಿದೆವು.

ಈ ಕೃತಿಯ ಹಸ್ತಪ್ರತಿಯ ಪರಿಸ್ಥಿತಿಯನ್ನು ವಿದ್ವಾನ್ ಶ್ರೀ ರಂಗನಾಥ ಶರ್ಮರವರು ತಮ್ಮ ಪ್ರಸ್ತಾವನೆಯಲ್ಲಿ ವರ್ಣಿಸಿ ದ್ದಾರೆ. ಆ ಸಾಮಗ್ರಿಯನ್ನು ಪರಿಶೀಲಿಸಿ ಪ್ರಕಟನೆಗೆ ಸಿದ್ಧ ಪಡಿಸುವುದು ಬಹು ಜವಾಬ್ದಾರಿಯ ಕೆಲಸವೆಂದು ಮನಗಂಡು ಆ ಕಾರ್ಯವನ್ನು ಸಾಧಿಸಬಲ್ಲ ವ್ಯಕ್ತಿ ಶ್ರೀ ರಂಗನಾಥ ಶರ್ಮರೇ ಎಂದು ತೀರ್ಮಾನಿಸಿ ನಾವು ಅವರನ್ನು ಈ ಕಾರ್ಯಕ್ಕೆ ಒಪ್ಪ ಬೇಕೆಂದು ಪ್ರಾರ್ಥಿಸಿದೆವು.

ಶ್ರೀ ರಂಗನಾಥ ಶರ್ಮರು ಸಂಸ್ಕೃತದ ಮತ್ತು ಕನ್ನಡದ ಘನ ವಿದ್ವಾಂಸರಾಗಿಯೂ, ಚಾಮರಾಜೇಂದ್ರ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಅಧ್ಯಾಪಕರಾಗಿ ಅತ್ಯುತ್ತಮ ಸೇವೆ ಸಲ್ಲಿಸಿ ದವರಾಗಿಯೂ, ಬೆಂಗಳೂರಿನ ರಾಮಾಯಣ ಪ್ರಕಾಶನ ಸಮಿತಿ ಯವರು ಪ್ರಕಟಿಸಿರುವ ಶ್ರೀಮದ್ವಾಲ್ಮೀಕಿ ರಾಮಾಯಣ ಮತ್ತು ಶ್ರೀಮದ್ಭಾಗವತದ ದಶಮಸ್ಕಂಧ ಇವುಗಳ ಅತ್ಯುತ್ತಮ ಕನ್ನಡ ಭಾಷಾಂತರಕಾರರಾಗಿಯೂ, 'ಲೌಕಿಕ ನ್ಯಾಯಗಳು', 'ಶ್ರೀಧರ ಸ್ವಾಮಿಗಳು' ಇವೇ ಮುಂತಾದ ಗ್ರಂಥಗಳ ಕರ್ತೃ ಗಳಾಗಿಯೂ ಪ್ರಸಿದ್ಧರಾಗಿದ್ದಾರೆ. ಅವರ ವಿಷಯದಲ್ಲಿ ಡಿ.ವಿ.ಜಿ.ಯವರಿಗೆ ಅಸಾಧಾರಣ ಗೌರವವಿತ್ತು. ವ್ಯಾಕರಣಕ್ಕೆ

ಸಂಬಂಧಪಟ್ಟ ಯಾವುದಾದರೂ ತೊಡಕನ್ನು ಪರಿಹರಿಸುವ ಸಮಸ್ಯೆಯೊದಗಿದಾಗ ಡಿ.ವಿ.ಜಿ.ಯವರು ಅದರ ಸಮರ್ಪಕ ಪರಿಹಾರಕ್ಕಾಗಿ ಶ್ರೀ ಶರ್ಮರ ನೆರವನ್ನು ಪಡೆಯುತ್ತಿದ್ದರು. ಅವರ ಇಂಥ ವಿಚಾರವಿಮರ್ಶೆಯು ಕೇವಲ ವ್ಯಾಕರಣ ಕ್ಷೇತ್ರಕ್ಕೇ ಸೀಮಿತವಾಗಿರಲಿಲ್ಲ; ಅದು ಸಾಹಿತ್ಯ, ವೇದಾಂತ ಮುಂತಾದ ಇತರ ಕ್ಷೇತ್ರಗಳಿಗೂ ವಿಸ್ತರಿಸಿತ್ತು. ಶ್ರೀ ಶರ್ಮರ ವಿದ್ವತ್ತಿನಷ್ಟೇ ಅವರ ಸೌಜನ್ಯವೂ ನಮ್ರತೆಯೂ ಡಿ.ವಿ.ಜಿ. ಯವರ ಹೃದಯವನ್ನು ಸೆರೆ ಹಿಡಿದಿತ್ತು. ಅವರಿಬ್ಬರಲ್ಲಿ ಗಾಢವಾದ ಆತ್ಮೀಯತೆಯು ಬೆಳೆದಿತ್ತು. ಡಿ.ವಿ.ಜಿ.ಯವರ ಮನೋಗತವನ್ನು ಅರಿತವರಿಂದಲೇ ಈ ಕೃತಿಯ ಸಮರ್ಪಕ ಸಂಪಾದನೆ ಸಾಧ್ಯವೆಂದು ಬೇರೆ ಹೇಳಬೇಕಾಗಿಲ್ಲ. ಮೇಲೆ ಹೇಳಿದ ಕಾರಣಗಳಿಂದ ಶ್ರೀ ಶರ್ಮರು ಆ ಕಾರ್ಯದ ನಿರ್ವಹ ಣೆಗೆ ಆದರ್ಶ ವ್ಯಕ್ತಿಯೆಂಬುದು ಸ್ವತಸ್ಸಿದ್ಧ. ಇದಲ್ಲದೆ ಶ್ರೀ ಶರ್ಮರು ಹಿಂದೆಯೇ ಅನೇಕರಿಗೆ ಪರಿಚಿತರಾಗಿದ್ದರೂ ಈ ನಾಡಿನ ಸಹೃದಯ ಜನಸ್ತೋಮಕ್ಕೆ ಅವರ ಅನೇಕ ವಿಧದ ಪ್ರತಿಭೆಯ ಲಾಭ ದೊರಕುವುದಕ್ಕೆ ಡಿ.ವಿ.ಜಿ.ಯವರು ಮುಖ್ಯ ಕಾರಣರಾಗಿದ್ದರೆಂದು ಧೈರ್ಯವಾಗಿ ಹೇಳಬಹುದು. ಅವರೀರ್ವರ ಸುಮಧುರ ಸ್ನೇಹದ ಫಲವಾಗಿ ಶ್ರೀ ಶರ್ಮರು ನಮ್ಮ ಸಂಸ್ಥೆಯಲ್ಲಿ ಅನ್ಯಾದೃಶವಾದ ಆಸಕ್ತಿಯನ್ನೂ ಪ್ರೇಮವನ್ನೂ ತೋರಿಸುತ್ತಾ ಬಂದು ಅನೇಕ ವಿಧದಲ್ಲಿ ನಮ್ಮ ಕಾರ್ಯ ಕ್ರಮಗಳನ್ನು ಬೆಂಬಲಿಸಿ ನಮ್ಮ ಪ್ರೇರಕಶಕ್ತಿಯಾಗಿದ್ದಾರೆ: ಹೆಚ್ಚೇಕೆ ? ಈ ಸಂಸ್ಥೆಯಲ್ಲಿ ತಾದಾತ್ಮ್ಯವನ್ನು ಪಡೆದಿದ್ದಾರೆ,ಅವರು ನಮ್ಮ ನಮ್ರತಾಪೂರ್ವಕ ಕೋರಿಕೆಯನ್ನು ಅವರಿಗೆ ನೈಜವಾದ ಔದಾರ್ಯದಿಂದ ಮನ್ನಿಸಿ, ಕೃತಿಯ ಸಂಪಾದನೆಯನ್ನು ಅತ್ಯಂತ

ಶ್ರದ್ಧೆಯಿಂದಲೂ ಸಾರ್ಥಕತೆಯಿಂದಲೂ ನಿರ್ವಹಿಸಿದ್ದಾರೆ. ಅವರ ಈ ಮಹೋಪಕಾರಕ್ಕಾಗಿ ನಮ್ಮ ಕೃತಜ್ಞತೆಯನ್ನು ಯಾವ ಮಾತುಗಳಲ್ಲಿ ಹೇಳಲು ಸಾಧ್ಯ ?

ಐಬಿಎಚ್ ಪ್ರಕಾಶನದವರು ಅತ್ಯಂತ ಮುತುವರ್ಜಿ ವಹಿಸಿ ಈ ಕೃತಿಯ ಪ್ರಕಾಶನದ ಕೆಲಸವನ್ನು ಬಹು ಅಚ್ಚುಕಟ್ಟಾಗಿ ಅತ್ಯಲ್ಪ ಕಾಲದಲ್ಲಿ ಮಾಡಿಕೊಟ್ಟಿದ್ದಾರೆ. ಇದಕ್ಕಾಗಿ ನಾವು ಆ ಸಂಸ್ಥೆಗೂ ಅದರ ವ್ಯವಸ್ಥಾಪಕರಾದ ಮಾನ್ಯ ಮಿತ್ರ ಶ್ರೀ ಜಿ. ಕೆ. ಅನಂತ ರಾವ್ ಅವರಿಗೂ ಚಿರಋಣಿಗಳು.

ಈ ಪುಸ್ತಕದಲ್ಲಿ ಎರಡು ಚಿತ್ರಗಳಿವೆ :

ಮೊದಲನೆಯದು 'ನಟರಾಜ', ಇದರ ಪಡಿಯಚ್ಚನ್ನು ತಯಾರಿಸಲು ನಮಗೆ ಭಾವಚಿತ್ರವನ್ನು ಒದಗಿಸಿದವರು : ಲಾಸ್ ಏಂಜಲೀಸ್ ಕೌಂಟಿ ಮ್ಯೂಸಿಯಂ ಆಫ್ ಆರ್ಟ್ (Los Angeles County Museum of Art.) ಮೂಲ ಪ್ರತಿಮೆ ಆ ಸಂಸ್ಥೆಗೆ ಅನಾಮಿಕ ದತ್ತಿ ; ಅದಕ್ಕೆ ಅವರು ಕೊಟ್ಟಿರುವ ಹೆಸರು : ಶಿವ, ನಟರಾಜ (Siva, King of Dancers.) ಮೂಲ ಪ್ರತಿಮೆಯ ಕರ್ತೃ ತಮಿಳುನಾಡಿನ ವ್ಯಕ್ತಿ, ಚೋಳ ಸಂತತಿ, ೧೦ನೇ ಶತಮಾನ [Tamil Nadu (artist), Chola Dynasty, 10 Century.] ಈ ಪ್ರತಿಮೆಯ ಭಾವಚಿತ್ರವನ್ನು ಒದಗಿಸಿದುದಕ್ಕಾಗಿ ನಾವು ಲಾಸ್ ಏಂಜಲೀಸ್ ಕೌಂಟಿ ಮ್ಯೂಸಿಯಂ ಆಫ್ ಆರ್ಟ್ ಸಂಸ್ಥೆಗೆ ಅತ್ಯಂತ ಕೃತಜ್ಞರಾಗಿದ್ದೇವೆ.

ಎರಡನೆಯ ಚಿತ್ರ : ಶ್ರೀ ಶೃಂಗೇರಿ-ಶಿವಗಂಗಾ ಮಠದಲ್ಲಿರುವ ಶಾರದಾ ವಿಗ್ರಹ. ಇದರ ಭಾವಚಿತ್ರವನ್ನು ತೆಗೆದು ಪಡಿಯಚ್ಚು ಮಾಡಿ ಈ ಪುಸ್ತಕದಲ್ಲಿ ಉಪಯೋಗಿಸಲು ಶೃಂಗೇರಿ-ಶಿವಗಂಗಾ ಮಠದ ಶ್ರೀ ಶ್ರೀ ಶ್ರೀ ಸ್ವಾಮಿಗಳು ಕೃಪೆಯಿಟ್ಟು ಅನುಮತಿ

ಕೊಟ್ಟಿದ್ದಾರೆ. ಇದಕ್ಕಾಗಿ ಅವರಿಗೆ ನಾವು ಅತ್ಯಂತ ಕೃತಜ್ಞರು. ಈ ಪ್ರಯತ್ನದಲ್ಲಿ ನಮಗೆ ಆದರದಿಂದ ನೆರವು ನೀಡಿದ ಮಾನ್ಯ ಮಿತ್ರರಾದ ಶ್ರೀ ಎಸ್. ಜಿ. ನರಸಿಂಹಯ್ಯನವರಿಗೆ ನಮ್ಮ ಪ್ರೇಮದ ವಂದನೆಗಳು.

ಶಾರದಾ ವಿಗ್ರಹದ ಭಾವಚಿತ್ರವನ್ನು ತೆಗೆಯಲು ಅತ್ಯಂತ ಶ್ರಮ ವಹಿಸಿ ಅದನ್ನು ಉತ್ತಮವಾದ ರೀತಿಯಲ್ಲಿ ಸಿದ್ಧಪಡಿಸಿ ಕೊಟ್ಟ ಶ್ರೀ ಬಿ. ಕೇಸರ್‌ಸಿಂಗ್ ಅವರಿಗೆ ನಾವು ಚಿರಋಣಿಗಳು.

ಕೃತಿಯನ್ನು ಕುರಿತು ಶ್ರೀ ಶರ್ಮರವರು ತಮ್ಮ ಪ್ರಸ್ತಾವನೆಯಲ್ಲಿ ವಿಮರ್ಶಾತ್ಮಕವಾದ ಕೆಲವು ಮಾತುಗಳನ್ನು ಹೇಳಿದ್ದಾರೆ. ಡಿ.ವಿ.ಜಿ.ಯವರ 'ಮಂಕುತಿಮ್ಮನ ಕಗ್ಗ'ವು ನಮ್ಮ ನಾಡಿನಲ್ಲಿ ಅನನ್ಯವಾದ ಖ್ಯಾತಿಯನ್ನು ಗಳಿಸಿಕೊಂಡಿದೆ. ಅದರ ವ್ಯಾಪ್ತಿ ಮನುಷ್ಯನ ಜೀವನದಷ್ಟೇ ವಿಶಾಲವಾದುದು. ಈ ಕೃತಿಯೂ ಅದೇ ರೀತಿಯದು. ಅಷ್ಟೇ ಉದಾತ್ತವಾದ ಭಾವನೆಗಳನ್ನು ಅಸದೃಶವಾದ ರೀತಿಯಲ್ಲಿ ಚಿತ್ರಿಸುವಂಥದು. ಶ್ರೀ ಶರ್ಮರು ಹೇಳಿರುವಂತೆ "ಈ ಗ್ರಂಥವು 'ಮಂಕುತಿಮ್ಮನ ಕಗ್ಗ'ದ ಎರಡನೆಯ ಭಾಗವಾಗಿದೆ. ಅದಕ್ಕೆ ಇದು ಪೂರಕ." ಇಂಥ ಅಮೂಲ್ಯ ಕೃತಿಯನ್ನು ಅತ್ಯಂತ ಸಂತೋಷದಿಂದಲೂ ಅಭಿಮಾನದಿಂದಲೂ ಓದುಗರಿಗೆ ಅರ್ಪಿಸುತ್ತೇವೆ.

ನಿಟ್ಟೂರು ಶ್ರೀನಿವಾಸರಾವ್
ಗೌರವ ಕಾರ್ಯದರ್ಶಿ
ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ

ಬೆಂಗಳೂರು
ರುಧಿರೋದ್ಗಾರಿ
ಪುಷ್ಯ, ಶುಕ್ಲ, ದ್ವಾದಶೀ
ಮಕರ ಸಂಕ್ರಾಂತಿ
೧೫-೧-೧೯೮೪

# ಪ್ರಸ್ತಾವನೆ

ಡಾ। ಡಿ. ವಿ. ಗುಂಡಪ್ಪನವರ ಈ ಕೃತಿ, ಅವರು ಅಸ್ತಂಗತರಾದ ಮೇಲೆ ಉದಯಿಸುತ್ತಿದೆ. ಲೋಕಶಾಸ್ತ್ರಗಳ ಪರಿಶೀಲನೆಯಿಂದ ಮತ್ತು ಸ್ವಾನುಭವದಿಂದ ಅವರ ಮೇಧಾಶಕ್ತಿ ಪರಿಪಕ್ವವಾಗಿದ್ದಾಗ, ಆದರೆ ವಯೋಮಾನದಿಂದ ದೈಹಿಕಶಕ್ತಿ ಉಡುಗುತ್ತಿದ್ದಾಗ, ಈ ಗ್ರಂಥದ ರಚನೆಯಶಾಗಿದೆ. ಬಿಡಿ ಹಾಳೆಗಳಲ್ಲಿ ಕೆಲವು ಪದ್ಯಗಳನ್ನು ಅವರೇ ಸ್ವತಃ ಬರೆದಿದ್ದರು. (ಅವರ ಹಸ್ತಾಕ್ಷರದ ಮಾದರಿಯನ್ನು ೧೯೦ನೇ ಪುಟದ ಎದುರಿಗೆ ಕಾಣಿಸಿದೆ) ಕೆಲವನ್ನು ಬರೆಯಿಸಿದ್ದರು. ಇನ್ನು ಕೆಲವನ್ನು ಗೀಚಿದ್ದರು ಎಂದರೂ ಸರಿಯೆ. ಅಕ್ಷರಗಳನ್ನು ಗುರುತಿಸುವುದು ಕಠಿಣವಾಗಿತ್ತು. ಇವೆಲ್ಲವನ್ನೂ ಪರಿಷ್ಕರಿಸಿ ಮುದ್ರಿಸಬೇಕೆಂದು ಡಿ.ವಿ.ಜಿ.ಯವರ ಪುತ್ರರಾದ ಬಿ. ಜಿ. ಎಲ್. ಸ್ವಾಮಿಯವರು ಸಂಕಲ್ಪಿಸಿ ಆ ದಿಶೆಯಲ್ಲಿ ಪ್ರಯತ್ನವನ್ನೂ ನಡೆಸಿದ್ದರು. ಆದರೆ ಬಿರುಗಾಳಿಯಂತೆ ಎರಗಿ ಬಂದ ದೈವ ಅವರನ್ನು ಅಕಾಲದಲ್ಲಿ ಮಡಿಲಿಗೆ ಸೆಳೆದುಕೊಂಡಿತು.

ಕಡೆಗೆ ಈ ಗ್ರಂಥವನ್ನು ಪ್ರಕಟಿಸಬೇಕೆಂದು ನಿಶ್ಚಯಿಸಿ ನರಸಿಂಹರಾಜ ಕಾಲೊನಿಯ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯವರು, ಎಲ್ಲ ಪದ್ಯಗಳನ್ನು ಸಂಕಲನಮಾಡಿ ಪರಿಷ್ಕರಿಸಿ ಮುದ್ರಣಕ್ಕೆ ಅಣಿ ಮಾಡುವ ಕಾರ್ಯವನ್ನು ನನಗೆ ವಹಿಸಿ ಕೊಟ್ಟರು.

ಈ ಪದ್ಯಗಳು ಕ್ರಮವಾಗಿ ಮುಂದುವರಿದು ಒಂದು ಮುಕ್ತಾ

ಯದ ಘಟ್ಟವನ್ನು ತಲುಪಿಲ್ಲ. ಯಾವ ದಿನ ಇವುಗಳ ರಚನೆ ನಿಂತುಹೋಯಿತೋ ಅಲ್ಲಿಗೆ ಸಮಾಪ್ತಿ. ಅನಾರೋಗ್ಯದ ನಿಮಿತ್ತ ದಿಂದ ಇವುಗಳನ್ನು ತಿರುಗಿ ನೋಡಲು ಡಿ.ವಿ.ಜಿ.ಯವರಿಗೆ ಸಾಧ್ಯ ವಾಗಲಿಲ್ಲ. ಸ್ವತಃ ಬರೆದದ್ದನ್ನೋದುವುದು ಸಹ ಅವರಿಗೆ ಕಷ್ಟ ವಾಗಿತ್ತು. ಹೇಳಿ ಬರೆಸಿದ್ದರಲ್ಲಿ ಕೆಲವೆಡೆ ಛಂದಸ್ಸಿನ ದೋಷ; ಒಂದೆರಡು ಅಕ್ಷರ ಹೆಚ್ಚು ಅಥವಾ ಕಡಿಮೆ; ಒಂದೊಂದು ಪದ್ಯ ದಲ್ಲಿ ಶಬ್ದವನ್ನು ತುಂಬಬೇಕಾಗಿತ್ತು. ಕೆಲವು ಪದ್ಯಗಳಲ್ಲಿ ಮೂರು ಸಾಲುಗಳಿದ್ದವು. ನಾಲ್ಕನೆಯದನ್ನು ಭರ್ತಿ ಮಾಡಿರಲಿಲ್ಲ. ಈ ಅಂಶಗಳನ್ನು ಕುರಿತು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಗೌ॥ ಕಾರ್ಯದರ್ಶಿಗಳಾದ ಶ್ರೀ ನಿಟ್ಟೂರು ಶ್ರೀನಿವಾಸರಾಯ ರೊಡನೆ ಸಮಾಲೋಚಿಸಿದೆ. ಅವೆಲ್ಲವನ್ನೂ ಸೂಕ್ತವೆನಿಸಿದ ರೀತಿ ಯಲ್ಲಿ ನಾನು ಸರಿಪಡಿಸಬಹುದೆಂದೂ ನ್ಯೂನವಾದ ಭಾಗವನ್ನು ಪೂರ್ತಿಮಾಡಬೇಕೆಂದೂ ನನಗೆ ತಿಳಿಸಿದರು. ಅವರ ಅನುಮತಿ ಯಂತೆ ಅಲ್ಲಲ್ಲಿ ನಾನು ಕೈಯಾಡಿಸಿದ್ದೇನೆ.

ಛಂದಸ್ಸಿನ ದೃಷ್ಟಿಯಿಂದ ಅಧಿಕವಾದ ಅಕ್ಷರಗಳನ್ನು ತೆಗೆದು ಸರಿಪಡಿಸಿ ನ್ಯೂನವಾದ ಸ್ಥಳದಲ್ಲಿ ಒಂದೆರಡು ಅಕ್ಷರಗಳನ್ನು ಸೇರಿಸಿ ದ್ದೇನೆ. ಎಲ್ಲಿ ಒಂದೆರಡು ಶಬ್ದಗಳ ಆವಶ್ಯಕತೆಯಿದ್ದಿತೋ ಆ ಸ್ಥಳವನ್ನು ಅರ್ಥಾನುಗುಣವಾಗಿ ತುಂಬಿದ್ದೇನೆ. ಅದರಿಂದ ಗ್ರಂಥ ಕರ್ತರ ಅಭಿಪ್ರಾಯಕ್ಕೆ ಯಾವ ಧಕ್ಕೆಯೂ ಆಗಿಲ್ಲವೆಂದು ನನ್ನ ನಂಬಿಕೆ. ಆದರೂ ಪರಿಶಿಷ್ಟದಲ್ಲಿ ಕಾಣಿಸಿರುವ ಹದಿನೆಂಟು ಪದ್ಯಗಳ ವಿಷಯದಲ್ಲಿ ಹಾಗೆ ಹೇಳಲು ಧೈರ್ಯ ನನಗಿಲ್ಲ. ಅಪೂರ್ಣವಾಗಿದ್ದ ಆ ಪದ್ಯಗಳನ್ನು ಡಿ.ವಿ.ಜಿ.ಯವರು ಬೇರೊಂದು ರೀತಿಯಲ್ಲಿ ಪೂರ್ಣ ಮಾಡುತ್ತಿದ್ದಿರಬಹುದು. ಪೂಜ್ಯವಾದ ಅವರ ಅಭಿಪ್ರಾಯ

ಬೇರೊಂದು ಬಗೆಯಲ್ಲಿದ್ದಿರಬಹುದು. ಆದರೂ ಅವನ್ನು ಕೈಬಿಡ ಬಾರದು. ಬಿಟ್ಟರೆ ಓದುಗರಿಗೆ ಉಪಯುಕ್ತವಾಗುವುದಿಲ್ಲ—ಎಂದು ಅವುಗಳನ್ನು ನನಗೆ ಸೂಕ್ತವೆನಿಸಿದಂತೆ ಪೂರ್ಣಮಾಡಿದ್ದೇನೆ. ಆ ಪದ್ಯಗಳನ್ನು 'ಪರಿಶಿಷ್ಟ' ಎಂಬ ಹೆಸರಿನಲ್ಲಿ ಈ ಗ್ರಂಥದ ಕಡೆಗೆ ಮುದ್ರಿಸಲಾಗಿದೆ. ಅದರಲ್ಲಿ ನಾನು ಸೇರಿಸಿದ ಪದ್ಯಖಂಡವನ್ನು ಕಂಸದಲ್ಲಿ (Bracket) ಗುರುತಿಸಿದೆ. ಅಲ್ಲದೆ ಕಂಸದಲ್ಲಿ ತೋರಿಸಿರುವ ಎಲ್ಲ ಅಕ್ಷರಗಳೂ ಶಬ್ದಗಳೂ ಈ ಕೃತಿಯಲ್ಲಿ ನಾನು ಸೇರಿಸಿದವು.

ಡಿ.ವಿ.ಜಿ.ಯವರ 'ಮಂಕುತಿಮ್ಮನ ಕಗ್ಗ'ದಲ್ಲಿ ಯಾವ ರೀತಿ ವಿಷಯ ವಿಭಾಗ ಮಾಡಲಾಗಿದೆಯೋ ಹಾಗೆಯೇ ವಿಷಯಗಳನ್ನು ವಿಂಗಡಿಸಿ ಈ ಗ್ರಂಥದಲ್ಲಿಯೂ ತಲೆಬರಹಗಳನ್ನು ಕೊಡಲಾಗಿದೆ. ತಲೆಬರಹದ ಅಡಿಯಲ್ಲಿರುವ ಪದ್ಯಗಳು ಕಟ್ಟುನಿಟ್ಟಾಗಿ ಒಂದೇ ವಿಷಯಕ್ಕೆ ಸಂಬಂಧಿಸಿವೆಯೆಂದು ಹೇಳಲಾಗದು. ಕೆಲವು ಪದ್ಯಗಳನ್ನು ಬೇರೆ ವಿಷಯಗಳ ಅಡಿಯಲ್ಲಿಯೂ ಸೇರಿಸಲು ಸಾಧ್ಯವಿದೆ. ಈಗ ಮಾಡಿರುವುದು ಒಂದು ಸ್ಥೂಲವಾದ ವಿಭಾಗ. ಕಠಿಣ ಪದಗಳಿಗೆ ಅರ್ಥವನ್ನೂ, ಅವಶ್ಯಕವಾದೆಡೆ ಟಿಪ್ಪಣಿಯನ್ನೂ ಬರೆದು ಸೇರಿಸಿದ್ದೇನೆ. ಪೂಜ್ಯರಾದ ಡಿ.ವಿ.ಜಿ.ಯವರ ಪುಣ್ಯಸ್ಮೃತಿಗೆ ಇದೊಂದು ನನ್ನ ಅಳಿಲುಸೇವೆ. ಈ ಸೇವೆಗೆ ಅವಕಾಶವನ್ನು ಕಲ್ಪಿಸಿಕೊಟ್ಟ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಗೌ॥ ಕಾರ್ಯದರ್ಶಿಗಳಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರಿಗೂ, ಈ ಪುಸ್ತಕದ ಶೋಧನೆ, ಮುದ್ರಣ, ಕರಡನ್ನು ತಿದ್ದುವುದು—ಈ ಕಾರ್ಯಗಳಲ್ಲಿ ತುಂಬ ಉತ್ಸಾಹದಿಂದ ಶ್ರಮಿಸಿ ಸಹಕರಿಸಿ ಉಪಕರಿಸಿರುವ ಗೋಖಲೆ ಸಂಸ್ಥೆಯ ವ್ಯಾಸಂಗಗೋಷ್ಠಿಯ ಮಿತ್ರರಿಗೂ

ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

'ಮಂಕುತಿಮ್ಮನ ಕಗ್ಗ' ನಮ್ಮ ನಾಡಿನಲ್ಲಿ ತುಂಬ ಖ್ಯಾತಿಯನ್ನು ಗಳಿಸಿಕೊಂಡಿದೆ. ಈ 'ಮರುಳಮುನಿಯನ ಕಗ್ಗ'ವು ಆದರೆ ಮುಂದುವರಿದ ಭಾಗ ಅಥವಾ ಎರಡನೆಯ ಭಾಗ ಎಂದರೂ ಸಲ್ಲುವುದು. ಪದ್ಯಗಳ ಧಾಟಿ, ವಿಚಾರಸರಣಿ—ಎಲ್ಲವೂ ಅದೇ ಬಗೆಯವು. ಹಸ್ತಪ್ರತಿಯಲ್ಲಿ ಮೊದಲು ಕೆಲವು ಪದ್ಯಗಳು 'ಮಂಕುತಿಮ್ಮ' ಎಂಬ ಅಂಕಿತವನ್ನು ಪಡೆದಿದ್ದವು. ಅನಂತರ, ಅದೇನು ಕಾರಣವೋ, ಡಿ.ವಿ.ಜಿ.ಯವರು 'ಮರುಳ ಮುನಿಯ' ಎಂಬ ಅಂಕಿತದಿಂದ ಉಳಿದೆಲ್ಲ ಪದ್ಯಗಳನ್ನೂ ಪೂರೈಸಿದ್ದಾರೆ. 'ಮರುಳ ಮುನಿಯನು ನಾನು ಮಂಕುತಿಮ್ಮನ ತಮ್ಮ' (೬, ೭) ಎಂದು ಆರಂಭಿಸಿ ಎರಡು ಪದ್ಯಗಳನ್ನೂ ರಚಿಸಿದ್ದಾರೆ. 'ಕಗ್ಗವಿದು ಬೆಳೆಯುತಿದೆ ಲಂಕೆಯಲಿ ಹನುಮಂತ ಹಿಗ್ಗಿ ಬೆಳೆಸಿದ ಬಾಲದಂತೆ...' ಎಂದೂ ಹೇಳಿದ್ದಾರೆ. ಈ ಕಾರಣಗಳಿಂದ ಈ ಕೃತಿಗೆ 'ಮರುಳ ಮುನಿಯನ ಕಗ್ಗ' ಎಂಬ ನಾಮಕರಣ ಸರಿ ಎನಿಸಿತು.

ಈ ಗ್ರಂಥದ ವಿಷಯವಾಗಿ ಒಂದು ವಿಮರ್ಶೆಯನ್ನು ಬರೆಯಬೇಕೆಂದು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯವರು ನನಗೆ ತಿಳಿಸಿದರು. ಡಿ.ವಿ.ಜಿ.ಯವರ ಮಹೋನ್ನತ ದರ್ಶನವನ್ನು ವಿಮರ್ಶೆ ಮಾಡಲು ನಾನು ಯಾರು? ನನಗೆ ಅಂತಹ ಅರ್ಹತೆ ಇಲ್ಲ. ಆದರೂ ಈ ಗ್ರಂಥದ ವಸ್ತು ಯಾವುದು, ವಿಚಾರ ಸರಣಿ ಇಲ್ಲಿ ಹೇಗೆ ಸಾಗಿದೆ—ಎಂಬುದನ್ನು ವಾಚಕರಿಗೆ ಸಂಕ್ಷೇಪವಾಗಿ ಪರಿಚಯ ಮಾಡಿಕೊಡುವುದಕ್ಕಾಗಿ ನಾಲ್ಕು ಮಾತುಗಳನ್ನು ಬರೆಯಲು ಒಪ್ಪಿಕೊಂಡಿದ್ದೇನೆ.

ಇದರಲ್ಲಿ ವಿಚಾರಕ್ಕೆ ಒಳಗಾದ ವಸ್ತು ಮೂರು—ಅಧಿದೈವ,

ಅಧಿಲೋಕ ಮತ್ತು ಅಧ್ಯಾತ್ಮ. ಹಾಗೆಂದರೆ ಬ್ರಹ್ಮಾಂಡವೇ ವಿಚಾರಕ್ಕೆ ಒಳಗಾದ ವಸ್ತು! ಅಧ್ಯಾತ್ಮವೆಂಬಲ್ಲಿ ಆತ್ಮವೆಂದರೆ ನಮ್ಮ ಶರೀರ. ವ್ಯಷ್ಟಿಯಶಾಗಿ ಗಣಿಸಿದಾಗ ಅಧಿದೈವ ಮೊದಲಾದವು ಮೂರಾದರೂ ಸಮಷ್ಟಿಯಲ್ಲಿ ಒಂದೇ.

ಜಗತ್ತಿನ ಎಲ್ಲ ಆಗುಹೋಗುಗಳಿಗೆ ಕಾರಣವಾದ ಒಂದು ಮಹಾಚೈತನ್ಯ ಉಂಟು. ಅದನ್ನು ಬ್ರಹ್ಮವೆಂದೋ ಶಿವನೆಂದೋ ಹರಿಯೆಂದೋ ಮತ್ತೆ ಯಾವ ಹೆಸರಿನಿಂದಲೋ ಕರೆಯಬಹುದು. ಬಾಳಿಗೆ ನಂಬಿಕೆಯೊಂದು ದೃಢವಾಗಿ ಇರಬೇಕು. ಅದನ್ನು ಬಾಳನ್ನು ಬೆಳಗಿ ಜೀವನವನ್ನು ಹಸನು ಮಾಡುವುದು.

ನಂಬು ನೀಂ ದೈವವನು ನಂಬು ಸ್ವಯಂಭುವನು ।
ನಂಬು ಸಾಂಬನ ಮನದೆ ತುಂಬು ಭಕ್ತಿಯನು ॥
ಬಿಂಬವೋ ಕಂಬವೋ ನಂಬಿಕೆಯು ಮಾತ್ರದಿಂ— ।
ದಿಂಬುಗೊಳುವುದು ಜೀವ – ಮರುಳ ಮುನಿಯ ॥

(೬೧೫)

'ಗುರಿಯೊಂದು ಬೇಕು ಜಗದಡವಿಯಲಿ ಪಥ ಕಾಣೆ' (೨೬೩), 'ಈ ಲೋಕಜೀವನವೆಲ್ಲ ಆ ಮಹಾಚೈತನ್ಯದ ಒಂದು ಲೀಲೆ', 'ಲೀಲೆಯೋ ಜಗವೆಲ್ಲ ಲೋಕನಾಟಕಲೀಲೆ' (೧೦೩), 'ಶಿವಲೀಲೆ ನಮ್ಮ ಬಾಳ್' (೯೯), 'ಭುವನಜೀವನವೆಲ್ಲ ಶಿವನ ಲೀಲಾರಂಗ' (೧೦೫). ಈ ಜಗನ್ನಾಟಕದಲ್ಲಿ ಎಲ್ಲ ಜೀವಗಳೂ ಪಾತ್ರಧಾರಿಗಳು, ಸೂತ್ರಧಾರನ ಇಚ್ಛೆಯಂತೆ ನಾಟಕ ನಡೆಯುತ್ತದೆ. ಹೀಗೇಕೆ? ಹೀಗೇಕೆ ಅಲ್ಲ? – ಎಂದು ಕೇಳತಕ್ಕವರು ನಾವಲ್ಲ. ನಮ್ಮ ಪಾತ್ರವನ್ನು ನಾವು ಚೆನ್ನಾಗಿ ಅಭಿನಯಿಸಿ

ತೆರಳಿದರೆ ನಮ್ಮ ಕೆಲಸ ಮುಗಿಯಿತು.

ಜಗತ್ತಿನ ಮೂಲತತ್ತ್ವವನ್ನು ಶೋಧಿಸಿ ಇದು ಹೀಗೆಯೇ ಎಂದು ನಿಶ್ಚಯಿಸುತ್ತೇನೆನ್ನುವುದು ಹುಂಬತನ. ಪ್ರಕೃತಿಯು ಎಂದಿಗೂ ತನ್ನ ರಹಸ್ಯವನ್ನು ಪೂರ್ಣವಾಗಿ ಬಿಟ್ಟುಕೊಡಳು. 'ಅರಸುತ್ತ ತತ್ತ್ವವನು ಬಹುದೂರ ಚರಿಸದಿರು', ನಿನಗೆ ಎಷ್ಟು ನಿಲುಕಿದೆಯೋ ಯಾವುದರ ನಂಬಿಕೆ ಹುಟ್ಟಿದೆಯೋ ಅದಷ್ಟನ್ನು ಶ್ರದ್ಧೆಯಿಂದ ಆಚರಿಸು. 'ಅರಿವಿಗೆಟಕಿದನಿತ್ತನೆಡೆ ಬಿಡದೆ ಚರಿಸು.' ಒಂದು ದಿನ ಹೆಚ್ಚಿನ ಬೆಳಕು ಕಂಡೀತು. 'ಈಶಕೃಪೆ ಬೀಸೀತು.' ಜ್ಞಾನವು ಪುಸ್ತಕದ ಹೊರೆಯಿಂದ ಬರತಕ್ಕದ್ದಲ್ಲ. ಚಿಂತನ ಮನನಗಳಿಂದ ತಾನಾಗಿ ಬರತಕ್ಕದ್ದು ಅದು. 'ತರುವಿನವೊಲರಿವು ತಾನಾಗಿ ಬೆಳೆವುದು ಸಾಜ.'

ಪ್ರಪಂಚದಲ್ಲಿ ಬದುಕನ್ನು ಸಾಗಿಸುವ ಮಾನವರಿಗೆ ಮರುಳ ಮುನಿಯನು ಹೇಳುವ ಕಿವಿಮಾತು ವಿಚಾರಪೂರಿತವಾದದ್ದು. ತುಂಬ ಮೌಲ್ಯವುಳ್ಳದ್ದು. ಆವನು ಬಹುದೊಡ್ಡ ದಾರ್ಶನಿಕ. 'ಅಂಧವತ್ ಜಡವಚ್ಚೈವ ಮೂಕವಚ್ಚ ಮಹೀಂ ಚರೇತ್' ಎಂಬ ವಚನದಂತೆ 'ಬ್ರಹ್ಮಪತ್ತನಭಿಕ್ಷುಕ'ನಾಗಿ 'ಮರುಳ' ಎಂಬ ಹೆಸರಿಟ್ಟುಕೊಂಡಿದ್ದಾನೆ.

'ನಂಬು ನೀಂ ದೈವವನು' ಎಂದ 'ಮರುಳ'ನಿಗೆ ಇನ್ನೊಂದು ಆಲೋಚನೆ ಹುಟ್ಟಿತು. 'ಈ ಮಾನವರು ಮೊದಲೇ ಆಲಸರು. ಎಲ್ಲವನ್ನೂ ದೈವದ ಮೇಲೆ ಹೊರಿಸಿ ಪೌರುಷವನ್ನು ನೀಗಿ ತೆಪ್ಪನಿದ್ದಾರು' ಎಂದು. ಒಡನೆಯೇ 'ನೆಚ್ಚದಿರು ದೈವವುಂ ಬೆಚ್ಚದಿರ ದಾರಿಗಂ' (೬೩೮) ಎಂದು ಎಚ್ಚರಿಕೆ ಕೊಡುತ್ತಾನೆ. ಮಾನವನೆಂಬ ಹಕ್ಕಿಗೆ ದೈವವೆಂಬುದೊಂದು ರೆಕ್ಕೆ, ಪುರುಷ ಪ್ರಯತ್ನವೆಂಬುದಿ

ನ್ನೊಂದು ರೆಕ್ಕೆ. ಎರಡು ರೆಕ್ಕೆಗಳ ನೆರವಿಲ್ಲದೆ ಹಕ್ಕಿ ಹಾರದು ಎಂದು ಮರುಳನ ಅಭಿಪ್ರಾಯ. ಮನುಷ್ಯನು ಲೋಕದಲ್ಲಿ ದುಡಿಯುತ್ತಲೇ ಸಾಗಬೇಕು. ಆದರಿಂದ ತನ್ನ ಹಿತವೂ ಉಂಟು; ಪರಹಿತವೂ ಉಂಟು. ದುಡಿದಂತೆ ಲೋಕಾನುಭವ ಹೆಚ್ಚಿ ಮನಸ್ಸಿಗೆ ಸಂಸ್ಕಾರ ವಾಗುತ್ತದೆ. ಸಂಸ್ಕಾರಗೊಂಡ ಮನಸ್ಸಿಗೆ ಜ್ಞಾನದ ಬೆಳಕು ದೂರ ವಿಲ್ಲ ಎನ್ನುತ್ತಾನೆ ಮರುಳ:

ದುಡಿ ಲೋಕದಲಿ ಮರುಳೆ ದುಡಿದೊಡಲ ಸವೆಯಿಸೈ ।
ಒಡಲು ಸವೆದಂತೆ ಮನದಲಗು ಸವೆಯುವುದು ॥ (೫೬೭)

ಕಂಡವರೆದುರಿಗೆ ನಮ್ಮ ಕಷ್ಟಕೋಟಲೆಗಳನ್ನು ಹೇಳಿಕೊಳ್ಳು ವುದು ತರವಲ್ಲ, ಅದರಿಂದೇನೂ ನಮ್ಮ ಕಷ್ಟ ನೀಗುವುದಿಲ್ಲ. ವ್ಯರ್ಥವಾಗಿ ಇನ್ನೊಬ್ಬರ ಮನಸ್ಸಿಗೆ ಕಿರಿಕಿರಿಯುಂಟುಮಾಡು ವುದೇ ಹೊರತು, ಅನ್ಯ ಫಲವಿಲ್ಲ. ನಮ್ಮ ಕಷ್ಟಗಳನ್ನು ಹೇಳಿ ಕೊಳ್ಳುವುದೆಂದರೆ ತುರಿಕಜ್ಜಿಗಳನ್ನು ಪಕ್ಕದವರಿಗೆ ಅಂಟಿಸಿದ ಹಾಗೆ! (೨೮೯). ಇಷ್ಟಾಗಿ ನಮ್ಮ ಕೋಟಲೆಯನ್ನು ಕೇಳಲು ಯಾರಿಗೆ ಬಿಡುವುಂಟು? ಅವರ ಪಾಡು ಅವರಿಗೆ ಇದ್ದೇ ಇದೆ—

ಲೋಕಕ್ಕೆ ಬಿಡುವಿಲ್ಲ ನಿನ್ನ ಚಿಂತಿಸುತಿರಲು ।
ಶೋಕಂಗಳದಕುಮಿಹುವಂತು ನಿನಗೆಂತೋ ॥ (೬೨೯)

ಜೀವರೆಲ್ಲ ಪರಮಾತ್ಮನ ಅಂಶ. ಆತನ ಮಹಿಮೆ ಎಲ್ಲರಲ್ಲಿಯೂ ಹರಡಿದೆ. ಒಂದರಲ್ಲಿ ಆ ಮಹಿಮೆ ಹೆಚ್ಚಾಗಿ ಅಭಿವ್ಯಕ್ತವಾಗಿರ ಬಹುದು, ಇನ್ನೊಂದರಲ್ಲಿ ಕಡಿಮೆ. ಚಿನ್ನ ಚಿನ್ನವೇ, ಎಲ್ಲರನ್ನೂ ಗೌರವದಿಂದ ನೋಡು.

ಜೀವ ತಾಂ ಬ್ರಹ್ಮದೈಶ್ವರ್ಯವದ ಗೌರವಿಸು।
ಜೀವದಶೆಯುಂಚ್ಛನೀಚಗಳ ನೀನರಿತು ॥ (೭೭೪)

ಅಧಿಕಾರ, ಐಶ್ವರ್ಯಗಳಿಂದ ಸುಖವುಂಟೆಂದೂ, ಅವು ಸುಖದ ಸುಪ್ಪತ್ತಿಗೆಯೆಂದೂ ತಿಳಿಯತಕ್ಕದ್ದಲ್ಲ. ಅವು ಹಲವಾರು ಸಂಕಟಗಳನ್ನು ತಂದೊಡ್ಡಬಹುದು. ಇಹವನ್ನು ತಪ್ಪಿಸಿ ಪರವನ್ನು ಮರೆಸಬಹುದು. ಭಗವಂತನ ಅನುಗ್ರಹ ನಾನಾ ರೂಪದಲ್ಲಿರುತ್ತದೆ. ಬಡತನ, ರೋಗ ರುಜಿನಗಳ ರೂಪದಲ್ಲೂ ಬರಬಹುದು. ಆದ್ದರಿಂದ ಧರ್ಮವು ಸರಿಯಾದ ಫಲವನ್ನು ಕೊಡಲಿಲ್ಲವೆಂದು ಗೊಣಗಬೇಡ—

ಶಿವನೀವ ವರಗಳತಿ ವಿವಿಧ ನೀನೆಚ್ಚರಿರು
ನವಮಲ್ಲಿಗೆಯು ನಡುವೆ ನಾಗರಿದ್ದೀತು।
ಸವಿಯಿನಮಲಾಗಿಪನು ಕಹಿಯಿಟ್ಟು ಪರಿಕಿಪನು
ಅವನ ನೆನೆದೂಟವುಣು—ಮರುಳ ಮುನಿಯ ॥ (೬೩೬)

ಮನುಷ್ಯನು ಹಣ, ಹಣ ಎಂದು ಒರಲುತ್ತಲೇ ಇರುತ್ತಾನೆ. ಅದು ಸಿಗದು, ಸುಖ ಬರದು—ಎಂಬಂತೆ ನೆರಳನ್ನು ಬೆನ್ನಟ್ಟಿ ಓಡುತ್ತಿದ್ದಾನೆ. ಸುಖಪಡಲು ಮನುಷ್ಯನಿಗೆ ಬೇಕಷ್ಟು ಸಾಮಗ್ರಿಗಳನ್ನು ಪ್ರಕೃತಿ ಒದಗಿಸಿದ್ದಾಳೆ. ಮನುಷ್ಯನು ದೊರಕಿದ್ದನ್ನು ಕೈಬಿಟ್ಟು ಹೊಸದಕ್ಕೆ ಕೈ ಚಾಚಿ ಪರಿತಪಿಸುತ್ತಿದ್ದಾನೆ. ಯಾವನ ಮನಸ್ಸು ವಿಕಸಿತವಾಗಿಲ್ಲವೋ ಅವನು ಧನದಿಂದಲೂ ಸುಖಪಡಲಾರ. ವಿಕಸಿತಾಂತಃಕರಣವೇ ಸುಖದ ಮೂಲ, ಹಣವಲ್ಲ; ಪ್ರಕೃತಿಯು ಸರ್ವಸಮವಾಗಿ ಹಂಚಿದ ಸಾಮಗ್ರಿಯಿಂದ ಯಾವನು ಸಂತೋಷಿಸನೋ ಅವನೇ ಬಡವ.

ಬಡವನಾರ್? ಮಡದಿಯೊಲವಿನ ಸವಿಯನರಿಯದವನು ।
ಹುಡುಗರಾಟದಿ ಬೆರೆತು ನಗಲರಿಯದವನು ॥
ಉಡುರಾಜನೋಲಗದಿ ಕುಳಿತು ಮೈಮರೆಯದವನು ।
ಬಡಮನಸೆ ಬಡತನವೊ—ಮರುಳ ಮುನಿಯ ॥ (೫೫೪)

ನಿನಗೆ ಯಾವುದು ಹಿತ, ಯಾವುದು ಹಿತವಲ್ಲ—ಎಂಬುದನ್ನು ಅಜ್ಞಾನಿಯಾದ ನೀನೇನು ಬಲ್ಲೆ? ನಿನಗೆ ಹಿತವಾಗಲೆಂದು ಕೇಳಿಕೊಳ್ಳುವುದಷ್ಟೆ ನಿನ್ನ ಕರ್ತವ್ಯ.

ವಿಹಿತಗೈವನು ವೈದ್ಯ, ನೀನಲ್ಲ, ರೋಗಿ ನೀಂ ।
ಗ್ರಹಿಸು ವಿಧಿಯೌಷಧವ—ಮರುಳ ಮುನಿಯ ॥ (೪೨೦)

ಬಹುಕಾಲ ಬದುಕುವುದಾಗಲಿ, ಬೇಗ ಸಾಯುವುದಾಗಲಿ ನಿನಗೆ ಸೇರಿದ್ದಲ್ಲ. ಕಣ್ಣುಮುಚ್ಚಿ ಧರ್ಮಮಾರ್ಗದಲ್ಲಿ ದುಡಿಯುತ್ತ ಹೋಗುವುದು ಮಾತ್ರ ನಿನ್ನ ಕರ್ತವ್ಯ.

ಮರಣವನು ಬೇಡದಿರು ಜೀವಿತವ ಬೇಡದಿರು ।
ತರುವುದೆಲ್ಲವ ಸಕಾಲಕ್ಕೆ ಕರ್ಮಚಕ್ರಂ ॥ (೨೯೯)

ಮನುಷ್ಯನಿಗೆ ನಿಜವಾದ ಸುಖವೆಂದರೇನೆಂಬ ಕಲ್ಪನೆಯೇ ಇಲ್ಲ. ಆದರೆ ಸುಖಬೇಕೆನ್ನುತ್ತ ಚಡಪಡಿಸುತ್ತಿದ್ದಾನೆ. ಅವನು ತಿಳಿದಿರುವಂತೆ ಕಷ್ಟವನ್ನು, ಒತ್ತಡವನ್ನು, ತೀಟೆಯನ್ನು ಹೋಗಲಾಡಿಸಿಕೊಳ್ಳುವುದೇ ಸುಖ. ಹಸಿವಾದಾಗ ತಿಂದರೆ, ಬಾಯಾರಿದಾಗ ಕುಡಿದರೆ, ತಲೆನೋವು ಗುಣವಾದರೆ ಸುಖ.

ತುರಿಬಂದ ಮೈಯ ಬೆರಲಿಂ ಕೆರೆವುದೊಂದು ಸುಖ ।
ಎರೆಗು ಬಿಸಿನೀರ ಪಲ್ಕಿರಿವುದೊಂದು ಸುಖ ॥

ಉರಿಯೆಂದು ಲೇಪಗಳ ಸವರಲಿನ್ನೊಂದು ಸುಖ ।
ನರಸುಖಗಳಿವು ತಾನೆ ?—ಮರುಳ ಮುನಿಯ ॥ (೩೯೪)

ಜಗತ್ತಿಗೆ ಶಾಶ್ವತವಾದ ಶಾಂತಿಯನ್ನು ತಂದುಕೊಡುತ್ತೇನೆನ್ನುವುದು ಬರಿಯ ಭ್ರಮೆ. ಅಂತಹ ಶಾಂತಿಸೂತ್ರ ಯಾವುದೂ ಇಲ್ಲ. ನಾವು ಮಾಡಬಹುದಾದದ್ದು ತಾತ್ಕಾಲಿಕವಾದ ಉಪಶಮನ, ಜಗತ್ತಿನ ಸೃಷ್ಟಿ ಯಾವಾಗಲೂ ವಿಷಮ. ಸಮುದ್ರದ ಅಲೆಯಂತೆ ಕದನನಿಮಿತ್ತವು ಹುಟ್ಟುತ್ತಲೇ ಇರುತ್ತದೆ. ಎಂತಹ ಮಹಾಪುರುಷರಿಗೂ ಜಗತ್ತನ್ನು ತಿದ್ದುವುದು ಅಸಾಧ್ಯ.

ಲೋಕವನು ತಿದ್ದಲಿಕೆ ಹೊರಟು ಗೆದ್ದವರಾರು ?
ಕಾಕುತಸ್ಥನೇ ಕೃಷ್ಣನೇ ಬುದ್ಧಜಿನರೆ ? ॥
ಸಾಕ್ರೆಟಿಸ್ ಏಸರೇ ಮೋಸಸ್ ಮುಹಮ್ಮದರೆ ।
ಸ್ವೀಕರಿಸಿತಾರನದು ?—ಮರುಳ ಮುನಿಯ ॥ (೪೯೫)

ಅಸಮತೆಯೋ ಶಿವಲೀಲೆ, ಅದೇಕೆಂದು ಕೇಳುವ ಅಧಿಕಾರ ನಮ್ಮದಲ್ಲ. ನಾವು ಕೇಳಿದರೆ ಶಿವನು ಸಮರೀತಿಯಲ್ಲಿ ನಡೆಯುವುದೂ ಇಲ್ಲ. ಬದುಕಿರುವವರೆಗೆ ನಿನ್ನ ಕೈಲಾದಷ್ಟು ಜನರಿಗೆ ಉಪಕಾರಮಾಡು. ನಿನ್ನ ಪಾತ್ರ ಮುಗಿದೊಡನೆ ನಟನು ರಂಗಸ್ಥಳದಿಂದ ತೆರಳುವಂತೆ ತೆರಳು. ಮುಂದಿನ ನಾಟಕ ದೃಶ್ಯದ ಚಿಂತೆ ನಿನಗೆ ಬೇಡ.

ಅನ್ಯರನು ನೀನುದ್ಧರಿಪ ಮಾತಹಂಕಾರ
ಮಣ್ಣುಹುಳುವೇಂ ಗಜವ ಕುಳಿಯಿನೆತ್ತುವುದು ?
(೬೨೨)

ಈ ಜಗತ್ತಿಗೆ ಎಲ್ಲಿಂದ ನೀನು ಬಂದೆ? ಎಲ್ಲಿಗೆ ಹೋಗು ತ್ತೀಯೆ?—ಎಂಬುದೇನೂ ನಿನಗೆ ತಿಳಿಯದು. ಏನನ್ನೂ ತರ ಲಿಲ್ಲ, ಏನನ್ನೂ ಒಯ್ಯುವುದಿಲ್ಲ ಎಂಬುದು ನಿನಗೆ ಚೆನ್ನಾಗಿ ಗೊತ್ತಿದೆ. ಮತ್ತೇಕೆ ಈ ತಟವಟ? ಎಡಬಲಗಳಿಗೆ ತಿರುಗದೆ ನಿನ್ನ ಕರ್ತವ್ಯವನ್ನು ಮಾಡುತ್ತ ಸಾಗು ಮುಂದೆ. ನೀನು ದುಡಿದು ತಂದ ಭೋಗಸಾಮಗ್ರಿಗಳು ನಿನ್ನವಲ್ಲ, ಈಶ್ವರನಿಂದ ಎರವಲಾಗಿ ತಂದವುಗಳವು. ನಿನ್ನವಾಗಿದ್ದರೆ ಸತ್ತಮೇಲೂ ನೀನು ಒಯ್ಯಬಹು ದಾಗಿತ್ತು. ಭೋಗಿಸಿಯಾದೊಡನೆ ನಿನ್ನ ಋಣ ಮುಗಿಯಿತು. ಮತ್ತೇಕೆ ಮಮತೆ ಅದರಲ್ಲಿ?

ಬೆತ್ತಲೆಯೆ ನೀಂ ಬಂದೆ ಬೆತ್ತಲೆಯೆ ನೀಂ ಪೋಪೆ।
ವಸ್ತ್ರವೇಷಗಳೆಲ್ಲ ನಡುವೆ ನಾಲ್ಕುದಿನ॥
ಜಟ್ಟಕ್ಕೆ ನಿನ್ನನೇರಿಪ ಮುನ್ನ ನೀನಾಗಿ।
ಕಿತ್ತೆಸೆಯೊ ಕಂತೆಗಳ—ಮರುಳ ಮುನಿಯ॥ (೬೩೭)

ಕಪ್ಪುಶಿಲೆ ಒಂದೆಡೆ ಬಿದ್ದಿತ್ತು. ಜಕ್ಕಣ್ಣ ಶಿಲ್ಪಿ ಇನ್ನೆಲ್ಲೋ ಇದ್ದ. ಜಗತ್ತಿನ ಪುಣ್ಯದಿಂದ ಇಬ್ಬರೂ ಒಂದೆಡೆ ಸೇರಿದರು. ಫಲ ಚೆನ್ನಕೇಶವಮೂರ್ತಿ. ಶಾಸ್ತ್ರ (ವಿಜ್ಞಾನ), ಕಾವ್ಯಗಳೂ ಹೀಗೆಯೇ. ಜಗತ್ತಿನ ಪುಣ್ಯಬಲದಿಂದ ಇವುಗಳ ನಿರ್ಮಾಣ. ಜೀವಕ್ಕೆ ಅತ್ಯಂತ ಉಪಯುಕ್ತವಾದವುಗಳಿವು. ಈ ಎರಡರ ಜೊತೆಗೆ ದೈವಾನು ಗ್ರಹವೊಂದು ಸೇರಿದರೆ ಸತ್ಯದ ಪ್ರಕಾಶ ದೂರವಿರದು.

ಜೀವಕ್ಕೆ ಸತ್ಯಾರ್ಥವನ್ನು ಬೆಳಗಿಸುವ।
ದೀವಿಗೆಗಳೀಮೂರು ಹೊರಗೊಳಗೆ ಸುತ್ತಲ್॥

ಕಾವ್ಯವಿಜ್ಞಾನಂಗಳಿವು ಮೇಲೆ ದೈವ ಪ್ರ- ।
ಭಾವವೇ ಮೂರೆಲವೊ—ಮರುಳ ಮುನಿಯ ॥ (೮೦೨)

ಡಾ॥ ಡಿ.ವಿ.ಜಿ.ಯವರ ವಿಚಾರದ ಆಳ, ಎತ್ತರ, ಅಗಲ ಸೀಮಾತೀತವಾದದ್ದು. ಒಂದೊಂದು ಪದ್ಯವೂ ಒಂದು ದೊಡ್ಡ ಪ್ರಬಂಧಕ್ಕೆ ವಿಷಯವನ್ನೊದಗಿಸುತ್ತದೆ. ಈ 'ಮರುಳ ಮುನಿಯ'ನು ಮಂತ್ರದ್ರಷ್ಟಾರನಾದ ಮುನಿಗಿಂತ ಕಡಿಮೆಯವನಲ್ಲ. ಮಂಕುತಿಮ್ಮನ ತಮ್ಮನಾದರೂ ಅಣ್ಣನಿಗೆ ಸರಿದೊರೆಯಾಗಿ ನಿಲ್ಲುತ್ತಾನೆ, ಕೆಲವೆಡೆ ಅವನನ್ನೂ ಮೀರಿಸುತ್ತಾನೆ. ಈ ಪದ್ಯಗಳ ಮೂಲಕ ತನ್ನ ಕೊರಗನ್ನು ಸುರಿವಿಕೊಂಡಿದ್ದಾನೆ (೬).

ಈ ಪುಸ್ತಕವನ್ನೊಮ್ಮೆ ಓದಿ ಅತ್ತ ತೆಗೆದಿರಿಸುವಂತಹದಲ್ಲ.

ನೆನೆನೆನೆಯುತೊಂದೊಂದು ಪದ್ಯವನದೊಮ್ಮೊಮ್ಮೆ ।
ಅನುಭವಿಸಿ ಚಪ್ಪರಿಸೋ............ ॥ (೧೦)

ವಾಸ್ತವದಲ್ಲಿ ಈ ಗ್ರಂಥವು 'ಮಂಕುತಿಮ್ಮನ ಕಗ್ಗ'ದ ಎರಡನೆಯ ಭಾಗವಾಗಿದೆ. ಅದಕ್ಕೆ ಇದು ಪೂರಕ, ಅಧ್ಯಯನಾರ್ಥಿಗಳು ಇವೆರಡನ್ನೂ ಒಟ್ಟಿಗೆ ವ್ಯಾಸಂಗ ಮಾಡುವುದರಿಂದ ಹೆಚ್ಚಿನ ಪ್ರಯೋಜನ ಉಂಟು.

ಎನ್. ರಂಗನಾಥ ಶರ್ಮಾ

ಬೆಂಗಳೂರು
ತಾ॥ ೧೦–೯–೧೯೮೩

# ಎರಡನೆಯ ಮುದ್ರಣ

ಡಾ॥ ಡಿ.ವಿ.ಜಿ.ಯವರ 'ಮರುಳ ಮುನಿಯನ ಕಗ್ಗ'ದ ಹಸ್ತಪ್ರತಿಯಲ್ಲಿದ್ದ ಛಂದಸ್ಸಿನ ದೋಷವನ್ನೂ ಲಿಪಿ ದೋಷವನ್ನೂ ಮೊದಲನೆಯ ಮುದ್ರಣದಲ್ಲಿ ಬಹುಮಟ್ಟಿಗೆ ಪರಿಷ್ಕರಿಸಲಾಗಿತ್ತು. ಆ ಸಮಯದಲ್ಲಿ ನನಗೆ ತೀವ್ರವಾಗಿದ್ದ ನೇತ್ರದೋಷದ ನಿಮಿತ್ತದಿಂದ ಕೆಲವು ನ್ಯೂನತೆಗಳು ಆ ಮುದ್ರಣದಲ್ಲಿ ಹೇಗೋ ಉಳಿದುಕೊಂಡಿದ್ದವು. ಇದಕ್ಕಾಗಿ ನಾನು ವಾಚಕರ ಕ್ಷಮೆಯನ್ನು ಬೇಡುತ್ತೇನೆ. ಈ ಮುದ್ರಣದಲ್ಲಿ ಆ ಪ್ರಮಾದಗಳನ್ನು ತಿದ್ದಿ ಪರಿಷ್ಕರಿಸಲಾಗಿದೆ. ಡಿ.ವಿ.ಜಿ.ಯವರ ಈ ಗ್ರಂಥದ ವಿಷಯವಾಗಿ ವಾಚಕರೂ ವಿಮರ್ಶಕರೂ ಪ್ರಶಂಸೆಯನ್ನು ವ್ಯಕ್ತಪಡಿಸಿದ್ದಾರೆ. ಅವರಿಗೆ ನನ್ನ ವಂದನೆಗಳು ಸಲ್ಲುತ್ತವೆ.

ಪ್ರಥಮ ಮುದ್ರಣದ ಪ್ರಸ್ತಾವನೆಯಲ್ಲಿ "ಈ ಮರುಳ ಮುನಿಯನು ಮಂತ್ರದ್ರಷ್ಟಾರನಾದ ಮುನಿಗಿಂತ ಕಡಿಮೆಯವನಲ್ಲ. ಮಂಕುತಿಮ್ಮನ ತಮ್ಮನಾದರೂ ಅಣ್ಣನಿಗೆ ಸರಿದೊರೆಯಾಗಿ ನಿಲ್ಲುತ್ತಾನೆ. ಕೆಲವೆಡೆ ಅವನನ್ನೂ ಮೀರಿಸುತ್ತಾನೆ" ಎಂದು ನನ್ನ ಅಭಿಪ್ರಾಯವನ್ನು ಪ್ರಕಟಿಸಿದ್ದೇನೆ. ಈ ಮಾತು ಹಲವರಿಗೆ ಮೆಚ್ಚುಗೆಯಾಗಲಿಲ್ಲವೆಂದು ತೋರುತ್ತದೆ.

ಗ್ರಂಥಕರ್ತನ ಚಿಂತನವೂ ಅನುಭವವೂ ಕಾಲ ಕಳೆದಂತೆ ಪರಿಪಕ್ವವಾಗುತ್ತ ಹೋಗುವುದು ಸಹಜ. ತಿಮ್ಮನ ಎಲ್ಲ ವಿಚಾರಗಳನ್ನು ಮೈಗೂಡಿಸಿಕೊಂಡಿದ್ದ ಮರುಳ 'ಕೆಲವೆಡೆ' ಎಂದರೆ—

ಅಧ್ಯಾತ್ಮ ಚಿಂತನದಲ್ಲಿ ಇನ್ನೂ ಮುಂದೆ ಹೋಗಿರುವುದು ಸಹಜವೇ. ಈ ಗ್ರಂಥದ ವಾಙ್ಮಯ ನದಿಯಲ್ಲಿ ಅಧ್ಯಾತ್ಮ ಚಿಂತನಗಳು ಲಹರಿ ಲಹರಿಯಾಗಿ ಹರಿದಿವೆ. ಮಂಕುತಿಮ್ಮನ ಕಗ್ಗದಲ್ಲಿ ಪರಮಾರ್ಥ ವಿಚಾರವು ಪರಿಮಿತ.

ಮನುಷ್ಯನಿಗೆ ಲೋಕವ್ಯವಹಾರ ಅನಿವಾರ್ಯವಾದದ್ದು. ಜೀವೋತ್ಕರ್ಷಕ್ಕೆ ಪರಮಾರ್ಥವಿಚಾರ ಆವಶ್ಯಕವಾದದ್ದು. ಡಿ.ವಿ.ಜಿ.ಯವರು ತಮ್ಮ ಕಡೆಯ ದಿನಗಳಲ್ಲಿ ವಿಶೇಷವಾಗಿ ಪರ ಮಾರ್ಥ ಚಿಂತನೆಯಲ್ಲಿ ಮಗ್ನರಾಗಿದ್ದರು. ಪರಮಾರ್ಥ ವಿಚಾರ ದಿಂದ ದೂರವಾದ ಲೌಕಿಕ ವ್ಯವಹಾರ ಹುರುಳಿಲ್ಲದ್ದೆಂದು ಅವರು ತಿಳಿದಿದ್ದರು. ಮರುಳ ಮುನಿಯನು ಕಾಲಮಾನದಿಂದ ಈಚೆಗೆ ಕಾಣಿಸಿಕೊಂಡ ಕಿರಿಯನಾದರೂ ಅನುಭವದಲ್ಲಿ, ಪರಿಪಕ್ವ ಚಿಂತನ ಪ್ರಕಾರಗಳಲ್ಲಿ ಹಿರಿಯನೆಂಬುದನ್ನು ನೆನಪಿನಲ್ಲಿಡಬೇಕು.

ಮರುಳ ಮುನಿಯನಲ್ಲಿ ಮಂಕುತಿಮ್ಮನ ಚಿಂತನ ಪ್ರಕಾರ ಅಲ್ಲಲ್ಲಿ ಪುನರುಕ್ತವಾಗಿದೆಯೆಂದು ಕೆಲವರು ಹೇಳಿದ್ದಾರೆ. ಪುನ ರುಕ್ತಿಯು ಪ್ರಾಚೀನ ಕಾವ್ಯ-ಶಾಸ್ತ್ರಗಳಲ್ಲಿಯೇ ಕಂಡುಬರುತ್ತದೆ. ಅದು ಉಪನಿಷತ್ತುಗಳಲ್ಲಿದೆ. ಭಗವದ್ಗೀತೆಯಲ್ಲಿದೆ. ಮಂಕುತಿಮ್ಮನ ಕಗ್ಗದಲ್ಲಿಯೂ ಇದೆ. ಹಿಂದೆ ಹೇಳಿದ ಒಂದಾನೊಂದು ವಿಷಯದ ಛಾಯೆ ಮುಂದಿನ ವಚನಗಳಲ್ಲಿ ಬರಬಹುದು. ಇದು ಪ್ರತಿಪಾದ್ಯ ವಿಷಯಕ್ಕೆ ಒತ್ತುಗೊಡುವುದಕ್ಕಾಗಿರುತ್ತದೆ. ಶಬ್ದಾಂತರಗಳಿಂದ ಹೇಳಿದ ಅದೇ ವಿಚಾರ ಇನ್ನೊಂದು ಧ್ವನಿತಾರ್ಥವನ್ನೊಳಗೊಂಡಿರ ಬಹುದು. 'ಪುರುಷ ಏವೇದಂ ಸರ್ವಂ' 'ಸರ್ವಂ ಖಲ್ವಿದಂ ಬ್ರಹ್ಮ' 'ಸದೇವ ಸೌಮ್ಯೇದಮಗ್ರ ಆಸೀತ್—ಇವು ಪುನರುಕ್ತಗಳಾಗಿ ಕಾಣುತ್ತವೆ. ಆದರೆ ಪುರುಷ, ಬ್ರಹ್ಮ, ಸತ್-ಎಂಬ ಶಬ್ದಗಳ

ಧ್ವನಿತಾರ್ಥ ಬೇರೆಯೆಂಬುದನ್ನು ಶಾಸ್ತ್ರಜ್ಞರು ಬಲ್ಲರು. 'ವ್ಯಾಸೋಚ್ಛಿಷ್ಟಂ ಜಗತ್ ಸರ್ವಂ.'

ಈ ಮುದ್ರಣದಲ್ಲಿ ಪದ್ಯಗಳನ್ನು ಮತ್ತೆ ಪರಿಷ್ಕರಿಸಲು ಒಪ್ಪಿಗೆಯನ್ನಿತ್ತ ಐಬಿಎಚ್ ಪ್ರಕಾಶನದ ವ್ಯವಸ್ಥಾಪಕರಾದ ಶ್ರೀ ಜಿ. ಕೆ. ಅನಂತರಾಮ್ ಅವರಿಗೆ ಕೃತಜ್ಞತೆಯ ವಂದನೆಗಳನ್ನರ್ಪಿಸುತ್ತೇನೆ.

ಬೆಂಗಳೂರು
೧೫-೪-೧೯೮೮

ಎನ್. ರಂಗನಾಥ ಶರ್ಮಾ

# ಎರಡನೆಯ ಮುದ್ರಣದ ಮುನ್ನುಡಿ

ಪೂಜ್ಯ ಡಿ.ವಿ.ಜಿ.ಯವರ 'ಮರುಳ ಮುನಿಯನ ಕಗ್ಗ'ವು ೧೯೮೪ರಲ್ಲಿ ಮೊದಲ ಬಾರಿ ಪ್ರಕಟವಾಯಿತು. ಡಿ.ವಿ.ಜಿ.ಯವರ ಇತರ ಗ್ರಂಥಗಳ ವಿಷಯದಲ್ಲಿ ತೋರಿರುವಂತೆಯೇ ಈ ಗ್ರಂಥಗಳ ವಿಷಯದಲ್ಲಿಯೂ ನಮ್ಮ ಜನ ಅಭಿಮಾನ ತೋರಿದ್ದಾರೆ. ಆದ್ದರಿಂದ ಎರಡನೆಯ ಮುದ್ರಣವನ್ನು ಹೊರತರಲು ಸಾಧ್ಯವಾಗಿದೆ.

ಹಿಂದೆ 'ಮಂಕುತಿಮ್ಮನ ಕಗ್ಗ'ದ ನಾಲ್ಕನೆಯ ಮುದ್ರಣದ ಸಮಯದಲ್ಲಿ, ಡಿ.ವಿ.ಜಿ.ಯವರು "ನಮ್ಮ ಜನ ನನ್ನ ತಲೆಯ ಮೇಲಿರಿಸಿರುವ ಹರಕೆಯ ಹೂವಿನ ವಾಸನೆ ಈ ನನ್ನ ಜೀವನದ ಉಸಿರಾಗಿದೆ. ಅವರಿಗೆ ನನ್ನ ಹೃದಯದ ಕೃತಜ್ಞತೆಯನ್ನು ಪೂರ್ತಿಯಾಗಿ ಅರಿಕೆ ಮಾಡಬಲ್ಲ ಮಾತುಗಳನ್ನು ನಾನರಿಯೆ" ಎಂದಿದ್ದರು. ನಮ್ಮ ಜನ ಡಿ.ವಿ.ಜಿ.ಯವರ ಗ್ರಂಥಗಳಲ್ಲಿ ತೋರುತ್ತಿರುವ ಆಸಕ್ತಿ-ಕುತೂಹಲ ಅವರನ್ನು ಜೀವಂತವಾಗಿಟ್ಟಿದೆ ಎಂದೇ ಹೇಳಬಹುದು. ಇದಕ್ಕಾಗಿ ಮಹಾಜನಕ್ಕೆ ನಮ್ಮ ಕೃತಜ್ಞತೆಗಳು.

ವಿದ್ವಾನ್ ಶ್ರೀ ಎನ್. ರಂಗನಾಥ ಶರ್ಮಾ ಅವರು ಈ ಮುದ್ರಣ ಕಾರ್ಯದಲ್ಲಿ ಆಸಕ್ತಿ ವಹಿಸಿ, ಪ್ರೂಫುಗಳನ್ನು ತಿದ್ದಿ, ಕೆಲಸ ಚೆನ್ನಾಗುವಂತೆ ಶ್ರಮವಹಿಸಿದ್ದಾರೆ. ಅವರಿಗೆ ನಮ್ಮ ವಂದನೆಗಳು.

ಐಬಿಎಚ್ ಪ್ರಕಾಶನದವರು ಈ ಮುದ್ರಣದ ಜವಾಬ್ದಾರಿಯನ್ನು ಹೊತ್ತು ಈ ಕೆಲಸವನ್ನು ಆಗಮಾಡಿಸಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಗಳು.

ಬೆಂಗಳೂರು
ವಿಭವ, ವೈಶಾಖ, ಶುಕ್ಲ, ಏಕಾದಶೀ
೨೭-೪-೧೯೮೮

**ಎಂ. ಎಸ್. ಶಂಕರರಾವ್**
ಗೌರವ ಕಾರ್ಯದರ್ಶಿ
ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ

# ಮೂರನೆಯ ಮುದ್ರಣ

ಡಿ.ವಿ.ಜಿ.ಯವರ "ಮಂಕುತಿಮ್ಮನ ಕಗ್ಗ"ದಲ್ಲಿನ ಪ್ರತಿಯೊಂದು ಪದ್ಯವನ್ನು ಸದಾ ಜೀವನದಲ್ಲಿ, ಓದಿ ನೆನೆಸಿಕೊಳ್ಳತಕ್ಕದ್ದು. "ಕಗ್ಗ" ಬಹಳ ಖ್ಯಾತಿ ಪಡೆದಿದೆ. ಮರುಮುದ್ರಣಗಳನ್ನು ಕಂಡಿವೆ. ಈ 'ಮರುಳಮುನಿಯನ ಕಗ್ಗ'ವು ಕಗ್ಗದ ಮುಂದುವರಿದ ಭಾಗ ಅಥವಾ ಎರಡನೆಯ ಭಾಗವೆಂದರೂ ಸಲ್ಲುತ್ತದೆ. ಮೊದಲನೆಯ ಭಾಗದಂತೆ ಎರಡನೆಯ ಭಾಗವು ನಾಡಿನಲ್ಲಿ ಖ್ಯಾತಿ ಗಳಿಸಿದೆ.

ಡಿ.ವಿ.ಜಿ.ಯವರ ಎಲ್ಲ ಗ್ರಂಥಗಳನ್ನೂ ಪ್ರಕಟಿಸಿದ ಕಾವ್ಯಾಲಯ ಪ್ರಕಾಶನದವರು 'ಮರುಳಮುನಿಯನ ಕಗ್ಗ'ವನ್ನೂ ಪ್ರಕಟಿಸಿ ಜನತೆ ಓದಲು ನೀಡಲಾಗಿದೆ. ಎಂದಿನಂತೆ ಜನರು ಓದಿ ಪ್ರೋತ್ಸಾಹಿಸಿ ಸಹಕರಿಸಬೇಕೆಂದು ಓದುಗರಲ್ಲಿ ಬಿನ್ನವಿಸಿಕೊಳ್ಳುತ್ತೇನೆ.

ಗೋಖಲೆ ಸಾರ್ವಜನಿಕ ಸಂಸ್ಥೆ ಗೌರವ ಕಾರ್ಯದರ್ಶಿಗಳಾದ ಶ್ರೀ ನಿಟ್ಟೂರು ಶ್ರೀನಿವಾಸರಾವ್‌ರವರು ನಮ್ಮ ಪ್ರಕಾಶನದಲ್ಲಿ ಈ ಪುಸ್ತಕವನ್ನು ಮುದ್ರಿಸಲು ಎಂದಿನಂತೆ ವಿಶ್ವಾಸದಿಂದ ಅನುಮತಿ ಇತ್ತು ಸಹಕರಿಸಿದ್ದಕ್ಕೆ ಅವರಿಗೆ ನನ್ನ ಕೃತಜ್ಞತೆಗಳು.

ನಮ್ಮ ಪ್ರಕಾಶನದ ಪುಸ್ತಕಗಳನ್ನು ಐವತ್ತು ವರ್ಷಗಳಿಂದಲೂ ಮುದ್ರಿಸಿಕೊಡುತ್ತಿರುವ ಶ್ರೀ ಜಿ. ಎಚ್. ರಾಮರಾವ್ ಅವರ ಸಹೋದರ ಶ್ರೀ ಜಿ. ಎಚ್. ಕೃಷ್ಣಮೂರ್ತಿ ಎಲ್ಲ ವಿಧದಲ್ಲೂ ಸಹಕರಿಸಿ ಶೀಘ್ರವಾಗಿ ಮುದ್ರಿಸಿದ್ದಾರೆ. ಅವರಿಗೂ ನಾನು ಕೃತಜ್ಞಳು.

ಶೇಷಮ್ಮ ಚಿದಂಬರಂ



ನಟರಾಜನಂಗಾಂಗ ವಿಕ್ಷೇಪ (೩೭೪)



ಸರಸತಿಯಂ ಸತ್ರ, ಬಳಿಯಿ (೧೨೬)

# ಮರುಳ ಮುನಿಯನ ಕಗ್ಗ

ಶ್ರೀಮಜ್ಜಗನ್ಮುಕುರ ವಿಸ್ತರದೊಳಾರ್ ತನ್ನ ।
ವೈಮೆಯ ಪ್ರತಿಬಿಂಬ ಚಿತ್ರಗಳ ನೋಡು-॥
ತ್ತಾವೋದಬಡುತಿಹನೊ ಆತನಡಿದಾವರೆಯ ।
ನಾವುರೆಸುವಂ ಬಾರೊ—ಮರುಳ ಮುನಿಯ ॥ ೧

ಶ್ರೀಮಜ್ಜಗದ್ದರ್ಪಣದೊಳಾವ ರಾಜಂ ಸ್ವ ।
ಸಾಮ್ರಾಜ್ಯ ಬಿಂಬಗಳ ತಾಂ ಕಾಣಲೆಂದು ॥
ಈ ಮೋಹನಾಗಾರವಂ ನಿರವಿಸಿದನವನ ।
ನಾಮುರೆಸುವಂ ಬಾರೊ—ಮರುಳ ಮುನಿಯ ॥ ೨

ಈ ಭುವನ ಮುಕುರದೊಳಗಾವಾಸಿತಂ ತನ್ನ ।
ವೈಭವ ವಿಲಾಸಗಳ ಕಾಣಲೆಂದೆಳಸಿ ॥
ಈ ಭಿದುರ ಭಿತ್ತಿಗಳ ನಿರವಿಸಿದನೋ ಅವನ ।
ಶೋಭೆಗೆರಗುವ ಬಾರೊ—ಮರುಳ ಮುನಿಯ ॥ ೩

ಶ್ರೀಮಂತನಾವನೀ ಭುವನ ಮುಕುರದಿ ನಿಜ ।
ಸ್ವಾಮಿತೆಯ ಲೀಲೆಗಳ ನೋಡಿ ನಲಿಯಲ್ಕೆ ॥
ಭೂಮ ಪ್ರಪಂಚವಂ ನಿರವಿಸಿದನೋ ಅವನ ।
ನಾಮುರೆಸುವಂ ಬಾರೊ—ಮರುಳ ಮುನಿಯ ॥ ೪

ದ್ವಂದ್ವ ತರ್ಕದಿನಾಚೆ ಶುಭ ಅಶುಭದಿಂದಾಚೆ ।
ಇಂದ್ರಿಯ ಸ್ಪರ್ಶನದ ಸುಖ ದುಃಖದಾಚೆ ॥
ಸಂದಿರ್ಪುದೊಂದು ದಶೆಯದು ನಿತ್ಯಸೌಖ್ಯದಶೆ ।
ಎಂದುಮರಸದನು ನೀ—ಮರುಳ ಮುನಿಯ ॥ ೫

## ಮರುಳ ಮುನಿಯನು ನಾನು

ಮರುಳ ಮುನಿಯನು ನಾನು ಮಂಕುತಿಮ್ಮನ ತಮ್ಮ ।
ಕೊರಗೆನ್ನದೆಯ ತಿತ್ತಿಯೊಳಗೆ ತುಂಬಿಹುದು ॥
ಸುರಿವೆನದನಿಲ್ಲಿ ಸಾಧುಗಳು ಸರಿಪೇಳರೇಂ ।
ಗುರುವಲೇ ಜಗ ನಮಗೆ—ಮರುಳ ಮುನಿಯ ॥ ೧

ಮರುಳ ಮುನಿಯನು ನಾನು ಮಂಕುತಿಮ್ಮನ ತಮ್ಮ ।
ಸುರಿವೆನೆನ್ನದೆಚೀಲದೆಲ್ಲ ಪುರುಳುಗಳ ॥
ಸರಿ ನೋಡಿ ಕೊಡುವ ಸಜ್ಜನರಿಹರೆ ಲೋಕದಲಿ ।
ಶರಣಪ್ಪೆನವರಿಂಗೆ—ಮರುಳ ಮುನಿಯ ॥ ೨

ಮರುಳ ಮುನಿಯನ ಮನಸು ಸರಳ ಬಾಳ್ವೆಯ ಕನಸು ।
ಸರಸ ಋತ ಸೌಜನ್ಯ ಶಾಂತಿಗಳ ಸೊಗಸು ॥
ಕೆರೆಯಿನೆದ್ದಲೆಯುರಚಿ ತಣಿವು ತುಂತುರನಿನಿತು ।
ಮರಳಿ ತೆರೆ ಸೇರ್ವುದಲ—ಮರುಳ ಮುನಿಯ ॥ ೩

ಕಗ್ಗವಿದು ಬೆಳೆಯುತಿದೆ ಲಂಕೆಯಲಿ ಹನುಮಂತ ।
ಹಿಗ್ಗಿ ಬೆಳಸಿದ ಬಾಲದಂತೆ ಸಿಗ್ಗಿಳಿದು ॥
ನುಗ್ಗಿ ಬರುತಿರೆ ಲೋಕದ ಪ್ರಶ್ನೆಗಳ ಧಾಳಿ ।
ಉಗ್ಗು ಬಾಯ್ಬುಪಲವಿದು—ಮರುಳ ಮುನಿಯ ॥ ೪

ಬಿನದ ಕಥೆಯೆಲ್ಲ ಹೃದ್ರಸದ ನಿರ್ಝರಿಯಲ್ಲ ।
ಮನನಾನುಸಂಧಾನಕಾದುದೀ ಕಗ್ಗ ॥
ನೆನೆನೆನೆಯುತೊಂದೊಂದು ಪದ್ಯವನದೊಮ್ಮೊಮ್ಮೆ ।
ಅನುಭವಿಸಿ ಚಪ್ಪರಿಸೊ—ಮರುಳ ಮುನಿಯ ॥ ೧೦

## ಪರಬ್ರಹ್ಮ

ಈಶ್ವರನೆನಿಪ್ಪವನ ಬೆಂಗಡೆಯೆ ತಾಂ ಬ್ರಹ್ಮ ।
ಶಾಶ್ವತಂ ಬ್ರಹ್ಮ ತಾತ್ಕಾಲಿಕಂ ದೇವರ್ ॥
ವಿಶ್ವಮಂ ನಿರ್ಮಿಸಿಯೆ ನಿರ್ವಹಿಪನೀಶ್ವರಂ ।
ನಿಷ್ಕ್ರಿಯಂ ಪರಬೊಮ್ಮ—ಮರುಳ ಮುನಿಯ ॥ ೧೧

ಉಸಿರೇನು ಹಸಿವೇನು ಅಳುವೇನು ನಗುವೇನು ।
ಬಿಸಿಯೇನು ತಣಿವೇನು ಹೊಳಹೊಳಪದೇನು ॥
ಅಸುವಿನೆಲ್ಲನುಭವಂಗಳು ಬ್ರಹ್ಮ ಚೈತನ್ಯ ।
ರಸವಿಸರವಲ್ಲವೇ—ಮರುಳ ಮುನಿಯ ॥ ೧೨

ಸತತ ಕಲ್ಲೋಲಮುಖಿ ನೋಡು ಮೇಲ್ಗಡೆ ಜಲಧಿ ।
ವಿತತ ಶಾಂತಿಯ ರಾಶಿಯದು ತೆರೆಗಳಡಿಯೊಳ್ ॥
ಕೃತಕ ಸಂಸಾರಿ ದಶೆ ಮೇಲಂತು ಬೊಮ್ಮಂಗೆ ।
ಸ್ವತ ಅವನು ನಿಶ್ಚೇಷ್ಟ—ಮರುಳ ಮುನಿಯ ॥ ೧೩

ಕೊಂಬುರೆಂಬೆಗಳೆಲೆಗಳಲುಗುವುವು ಮೇಲುಗಡೆ ।
ಕಂಬದಂತಚಲವಲೆ ಮರದ ಬುಡ ಮುಂಡ ॥
ಜೃಂಭಿಪುದು ಜೀವಾಳಿ ಮಾಯಾನಿಲದೊಳಂತು ।
ಕಂಪಿಸನು ಪರಬೊಮ್ಮ—ಮರುಳ ಮುನಿಯ ॥ ೧೪

ಚರಚರ್ಯರ್ಗಲೋಕದೊಳ್ ಸ್ಥಿರ ಪುರುಷತನವೊಂದು ।
ಪುರುಷತ್ವದೊಳ್ ಸ್ಥಿರಂ ಪ್ರಗತಿಮತಿಯೊಂದು ॥
ಸ್ಥಿರಲಕ್ಷ್ಯವಾಪಥದೊಳಾತ್ಮದುನ್ನತಿಯೊಂದು ।
ಪರಮಸ್ಥಿರಂ ಬ್ರಹ್ಮ—ಮರುಳ ಮುನಿಯ ॥ ೧೫

ಕನ್ನಡಿಯೆದುರು ನಿಂತು ಮಾನವನು ತನ್ನ ಲಾ–।
ವಣ್ಯಗಳ ನೋಡಿ ನೋಡುತ ಹಿಗ್ಗುವಂತೆ ॥
ಚಿನ್ಮಯಂ ಸೃಷ್ಟಿ ಚಿತ್ರದಿ ತನ್ನ ವೀರ್ಯ ಸಂ–।
ಪನ್ನತೆಯನನುಭವಿಪ—ಮರುಳ ಮುನಿಯ ॥ ೧೬

ಇರುವುದೊಂದೋ ಎರಡೊ ಎರಡರಂತೆಸೆವೊಂದೊ ।
ಅರೆಮರೆಯೊಳಿಪ್ಪುದೇನದು ಲೆಕ್ಕಕಿಲ್ಲ ॥
ಸ್ಥಿರದಿರ್ಕೆಯೇ ಇರ್ಕೆ ಧರಣಿಯೊಳ್ ಸ್ಥಿರಮೆಲ್ಲಿ ? ।
ಪರಮಾತ್ಮನೇ ಸ್ಥಿರವು—ಮರುಳ ಮುನಿಯ ॥ ೧೭

ಕಡಲಿಂಗೆ ಧುಮ್ಮಿಕ್ಕಿ ಕಣ್ಮೂಗುಗಳ ಬಿಗಿದು ।
ಮುಳುಗಿ ತಡಕಾಡಿ ಮೇಲ್ಬಂದು ದಡ ಸೇರ್ವ ॥
ಕಡಲಾಡಿವೋಲ್ಬ್ರಹ್ಮಚೈತನ್ಯವಾಡುವುದು ।
ಪೊಡವಿಯಶಾ ಮಡುವಿನಲಿ—ಮರುಳ ಮುನಿಯ ॥ ೧೮

ಲೀನಂ ಪರಬ್ರಹ್ಮದೊಳಗಿರ್ದನಾತ್ಮ ತಾಂ ।
ಕ್ಷೋಣೀವಿಲಾಸದೊಳು ತಾನು ಬೇರೆನಿಪಾ ॥
ಮಾನುಷ್ಯವನು ತಳೆದು ನಾನಾಕೃತಿಯ ತಾಳಿ ।
ಹೀನತೆಯ ಪಡುತಿಹನೊ—ಮರುಳ ಮುನಿಯ ॥ ೧೯

ಸಾಗರಂ ಬ್ರಹ್ಮವದರಿಂದೆ ತತ್ಕಾಲದುಪ–।
ಯೋಗಕಾಗಿಹ ಕಾಲ್ವೆಯೆಲ್ಲ ದೇವರ್ಕಳ್ ॥
ವಾಗೀಶ ಲಕ್ಷ್ಮೀಶ ಗೌರೀಶಮುಖರೆಲ್ಲ ।
ರಾಗ ಭೋಗಕ್ಕಲ್ತೆ ? —ಮರುಳ ಮುನಿಯ ॥ ೨೦

## ವಂದಿಸು ಅದೊಂದಕ್ಕೆ

ಒಂದಿರುವುದೆಂದೆಂದುಮೊಂದು ತಾನೇ ತಾನು ।
ಹಿಂದೆನಿಪುದಿಲ್ಲ ಮುಂದೆನಿಪುದಿಲ್ಲೆತ್ತಲ್ ॥
ಸಂದಿನಲಿ ಬಯಲಿನಲಿ ಬೀಡಿನಲಿ ಕಾಡಿನಲಿ ।
ವಂದಿಸೊ ಅದೊಂದಕ್ಕೆ—ಮರುಳ ಮುನಿಯ ॥ ೨೧

ಇರುವುದೊಂದೆಂದೆಂದುಮೆತ್ತೆತ್ತಲುಂ ಮರೆಯೊಳ್ ।
ಇರುವುದದು ಹೆರುವುದದು ಹೊರುವುದೆಲ್ಲವದು ॥
ಪಿರಿದು ತಾನಾಗಿರುತ ಕಿರಿದೆನಿಪುದೆಲ್ಲವನು ।
ಶರಣು ಆ ವೊಂದಕ್ಕೆ—ಮರುಳ ಮುನಿಯ ॥ ೨೨

ಒಬ್ಬಂಟಿ ದೈವವದು ಹಬ್ಬದೂಟವನೆಳಸಿ ।
ಇಬ್ಬರಾಟಕ್ಕಿಳಿದು ಹಲವಾಗಿ ಮತ್ತೆ ॥
ದಿಬ್ಬಣವ ನಡಸುತಿಹುದುಬ್ಬಿದೀ ಲೋಕದಲಿ ।
ಅದ್ಭುತಕೆ ನಮಿಸೆಲವೊ—ಮರುಳ ಮುನಿಯ ॥ ೨೩

ನೂರು ನೂರ್ ಗುಡಿಗಳಲಿ ನೂರ್ ನೂರ್ ಪೆಸರುಗಳ ।
ನೂರು ನೂರಾಕೃತಿ ವಿಲಾಸ ವಿಭವಗಳಿಂ–॥
ದಾರಾಧನೆಯನಾವನಂಗೀಕರಿಪನೊ ಅವ–।
ನೋರುವಂಗೀ ನಮನ—ಮರುಳ ಮುನಿಯ ॥ ೨೪

ದೇವನೋ ಧರ್ಮವೋ ಕಾಲವೋ ಕರ್ಮವೋ ।
ದೇವಿಯೋ ತತ್ತ್ವವೋ ಸ್ವಾಮಿಯೋ ವಿಭುವೋ ॥
ಪಾವನಾತ್ಮವೋ ಸಾಕ್ಷಿಯೋ ಪರಬ್ರಹ್ಮವೋ ।
ಆವಗಂ ನತಿಯುವಗೆ—ಮರುಳ ಮುನಿಯ ॥ ೨೫

ದೈವವೊಂದೇ ಸತ್ತ್ವವದರ ನೆರಳೆ ಜಗತ್ತು ।
ಆವಗಮದೆಲ್ಲೆಡೆಯುಂ ಗೂಢಮಿರುತಿಹುದು ॥
ನೋವು ಸಾವುಗಳೆಲ್ಲವಿರುವುದರ ದವಲತ್ತು ।
ನಾವದಕೆ ಮಣಿವಮೆಲೊ—ಮರುಳ ಮುನಿಯ ॥ ೨೬

ಜಗಕೆಲ್ಲ ಕಾರಣಂ ಪ್ರೇರಣಂ ಧಾರಣಂ ।
ಭಗವಂತನೆಂಬೊಂದದೇನೊ ಇಹುದಲ್ತೆ ॥
ಬಗೆವ ನಾಮದರ ಸಂಬಂಧಗಳ ಗೂಢಮದು ।
ಮುಗಿವ ಕೈಗಳನದಕೆ—ಮರುಳ ಮುನಿಯ ॥ ೨೭

ಶ್ರೀಮಂತನಾರ್ ತನ್ನ ಸಿರಿವಂತಿಕೆಯ ವಿಭವ ।
ಸಾಮರ್ಥ್ಯಗಳ ನೋಡಿ ಸಂತಸಿಸಲೆಂದೀ ॥
ಭೂಮ್ಯಾದಿಯಿಂ ಜಗದ್ದರ್ಪಣವ ರಚಿಸಿಹನೊ ।
ಆ ಮಹಾತ್ಮಂಗೆ ನಮೊ—ಮರುಳ ಮುನಿಯ ॥ ೨೮

ಜಾಗರೂಕತೆ ಸಹನೆ ಸದಸದ್ವಿವೇಕವೀ ।
ತ್ರೈಗುಣ್ಯ ನೀಗುವುದು ಬಹು ಕಷ್ಟಗಳನು ॥
ಆಗದೊಡೆ ದೈವಕ್ಕೆ ತಲೆಬಾಗು ಶರಣೆಂದು ।
ಬಾಗು ತಲೆಯನುಂ ನಗುತ—ಮರುಳ ಮುನಿಯ ॥ ೨೯

ಪ್ರಕಟರಂಗದೊಳಾರು ನಿಜ ಬಾಲರನು ವಿವಿಧ।
ವಿಕಲ ಪಾತ್ರದ ನಟನೆಯಾಡುವುದ ನೋಡಿ॥
ಸಕಲ ತಾನಿರುತ ಗೂಢದಲಿ ನಲಿಯುತ್ತಲಿಹ।
ವಿಕಟರಸಿಕಂಗೆ ನಮೊ—ಮರುಳ ಮುನಿಯ॥ ೩೦

## ಪಾಲಕನ ನೆನೆ ಮಣಿದು

ಲೀಲೆಗೆಂದೀಜಗವ ರಚಿಸಿ ಲೀಲೆಗೆ ತಾನೆ।
ಮೂಲಾದಿಯೆನಿಪವೋಲ್ ನಾಮರೂಪಗಳ॥
ಚೇಲಂಗಳೊಳ್ಗವಿತು ಜಗವ ವೀಕ್ಷಿಸುತಿರ್ಪ।
ಪಾಲಕನ ನೆನೆ ಮಣಿದು—ಮರುಳ ಮುನಿಯ॥ ೩೧

ಅವ್ಯಕ್ತ ಸತ್ತು ತಾಂ ವ್ಯಕ್ತವಹನೆನೆ ಚಿತ್ತು।
ಅವ್ಯಾಜದಿಂ ಚಿತ್ತು ಲೀಲಿಸೆ ಜಗತ್ತು॥
ಸುವ್ಯಕ್ತ ಸಚ್ಚಿದಾನಂದಮೆ ಸಕಲ ಜಗತ್ತು।
ಸೇವ್ಯವದು ಸರ್ವರ್ಗೆ—ಮರುಳ ಮುನಿಯ॥ ೩೨

ಲೀನಮುಂ ವಿಶದಮುಂ ಸಕ್ಕರೆಯು ನೀರಿನೊಳು।
ಪಾನಕಂ ಬಾಯ್ಗೆ ಸವಿ ಕಣ್ಗೆ ಕೈಗಿರದು॥
ನೀನಂತು ವಿಶ್ವಜೀವನಕಾಗು ಸನ್ಮಿತ್ರ।
ನೀನಾಗು ನಾನಿರದೆ— ಮರುಳ ಮುನಿಯ॥ ೩೩

ಸದಸದ್ವಿವೇಕ ವೈಶದ್ಯವಂ ನೀಡುವಾ।
ಚಿದನಂತರೂಪಿ ಭಕ್ತರ್ಗೆ ಸರ್ವರೊಳಂ॥
ಹೃದಯ ಪದ್ಮಾವಾಸ ಲೀಲಾಪ್ತನಾ ಶಿವನ।
ಪದವ ನೀಂ ಪಿಡಿ ಬಿಡದೆ—ಮರುಳ ಮುನಿಯ॥ ೩೪

ಇರುವೊಂದು ಮೆರೆವೊಂದು ಅರಿವೊಂದು ಮೂರನುಂ ।
ಪೊರುವೊಂದು ಪರಿಕಿಸಿದರರ್ಥವಂ ಮರುಳೆ ॥
ಇರುವುದದು ಸತ್ಯ ಮೆರೆವುದು ಲೋಕ ಅರಿವಾತ್ಮ ।
ಪೊರುವುದೇ ಬ್ರಹ್ಮವದು—ಮರುಳ ಮುನಿಯ ॥ ೩೫

## ಸಾಕ್ಷಿಮಾತ್ರನು ಶಿವನು

ಅಕ್ಷಯಾಖಂಡ ನಿರ್ಲಿಪ್ತ ವಸ್ತುವೊ ಶಿವನು ।
ಶಿಕ್ಷೆರಕ್ಷೆಗಳವನ ಲಕ್ಷಣವೆನಿಪ್ಪಾ ॥
ವಿಕ್ಷೇಪಮುಂ ಬ್ರಹ್ಮನಾಟಕ ಭ್ರಮೆಯಂಶ ।
ಸಾಕ್ಷಿಮಾತ್ರನೊ ಶಿವನು—ಮರುಳ ಮುನಿಯ ॥ ೩೬

ಕಣ್ಣೀರ ಸುರಿ ಕೆರಳು ಕಾದು ಕೊಲ್ ಕೊಲ್ಲಿಸಿಕೊ ।
ಬಿನ್ನಣಿಸು ಹಂಬಲಿಸು ದುಡಿ ಬೆದರು ಬೀಗು ॥
ಚಿಣ್ಣರಾಟವೆನೆ ನೋಡುತೆ ನಿನ್ನ ಪಾಡುಗಳ ।
ತಣ್ಣಗಿರುವನು ಶಿವನು—ಮರುಳ ಮುನಿಯ ॥ ೩೭

ದಶಮುಖನ ಕಾಮಾಂಧ್ಯ ಕುರುಪತಿಯ ಲೋಭಾಂಧ್ಯ ।
ಕುಶಿಕಜನ ತಪದುರುಬು ಮೋಹದುರುಬುಗಳು ॥
ರುಷೆಯೊ ರುಜನವೊ ರಿಕ್ತತೆಯೊ ರಾಗಚೇಷ್ಟೆಗಳೊ ।
ರಸದೂಟ ಶಿವನಿಗದು—ಮರುಳ ಮುನಿಯ ॥ ೩೮

ತವಿಸುಗೆ ಹರಿಶ್ಚಂದ್ರನಳುತಿರ್ಕೆ ಚಂದ್ರಮತಿ ।
ಧವನ ನೆನೆದಲೆದಾಡುತಿರ್ಕೆ ದಮಯಂತಿ ॥
ಕುವರನಳಿಯೆ ಸುಭದ್ರೆ ಫಲುಗುಣರ್ಗೋಳಿಡುಗೆ ।
ಶಿವನಿಗದು ನವರುಚಿಯೊ—ಮರುಳ ಮುನಿಯ ॥ ೩೯

ರಸಭಾಂಡವೀ ಲೋಕ ರಸಲೋಲುಪನು ಶಿವನು ।
ಕುಸುಮಗಳು ಜೀವಿಗಳು ಬಗೆಬಗೆಯು ಮಧುವು ॥
ಹಸಿದನವೊಲೊಂದೊಂದನುಂ ಬಿಡದೆ ಸವಿಪನಾ- ।
ಪಶುಪತಿಯೊ ರಸಪತಿಯೊ—ಮರುಳ ಮುನಿಯ ॥ ೪೦

## ಈಶ್ವರನಲ್ಲಿ ಎಲ್ಲವೂ ಲೀನ

ಲೀನವಿಹವೀಶನಲಿ ಸತ್ಯಗಳು ಮಿಥ್ಯೆಗಳು ।
ಮಾನಗಳು ಮೇಯಗಳು ಪ್ರಕೃತಿ ಮಾಯೆಗಳು ॥
ಭಾನಗಳಭಾನಗಳು ಪೂಜ್ಯಗಳಪೂಜ್ಯಗಳು ।
ಸೂನೃತಗಳಘಬೀಜ—ಮರುಳ ಮುನಿಯ ॥ ೪೧

ಉದಧಿಯಲಿ ನದಿನದಗಳುದಕ ಭೇದಗಳೈಕ್ಯ ।
ಬದುಕಿನಲಿ ಮತ(ರೀತಿ)ಭೇದಂಗಳೈಕ್ಯ ॥
ಸದಮಲಾತ್ಮದೊಳೆಲ್ಲ ಲೋಕಭೇದಗಳೈಕ್ಯ ।
ಇದಿರಿಗಿಹುದೇಕಾತ್ಮ—ಮರುಳ ಮುನಿಯ ॥ ೪೨

ಎರಡು ಪಕ್ಕಗಳು ನಿನ್ನ ಜೀವನದ ಪಾಂಥಕ್ಕೆ ।
ಪರತತ್ತ್ವವೊಂದು ಲೋಕದ ಮಾಯೆಯೊಂದು ॥
ತೊರೆಯಲಾಗದು ನೀನದಾವುದನು ನಿಚ್ಚವುಂ ।
ಮರೆಯ ಬೇಡೊಂದನುಂ—ಮರುಳ ಮುನಿಯ ॥ ೪೩

ಲೋಕ ಜೀವನದೊಳೇಕೀಭವಿಸುತಂ ಪ್ರ- ।
ತ್ಯೇಕ ತಾನೆಂಬೆಣಿಕೆಗೆಡೆಗೊಡದೆ ಮನದಿ ॥
ಸಾಕಲ್ಯ ಲೋಕದಲಿ ತನ್ನತಾಂ ಮರೆತಿರ್ಪ ।
ನಾಕಾಶದಿಂ ಮೇಲೆ—ಮರುಳ ಮುನಿಯ ॥ ೪೪

ಕ್ಷಣವಮೂರ್ತಾನಂತ ಕಾಲದುಪಕೃತಿ ಮೂರ್ತಿ ।
ಕಣವಮೇಯಾದಿ ವಸ್ತುವಿನಮೇಯಮುಖ ॥
ಕ್ಷಣಿಕವನಪೇಕ್ಷಿಪೆಯ ? ಗಮಕವದನಂತಕ್ಕೆ ।
ಅಣು ಮಹತ್ಪ್ರತಿನಿಧಿಯೊ—ಮರುಳ ಮುನಿಯ ॥ ೪೫

ಈಶನಿಚ್ಛೆ ಸಮುದ್ರ, ನೀನದರೊಳೊಂದು ಕಣ ।
ಲೇಶದೊಳಗರಸುವೆಯ ರಾಶಿಯುಮಿತವನು ? ॥
ರಾಶಿಯೆಲ್ಲವ ಕಾಣ್ಬೊಡದರೊಳಗೆ ಕರಗಿ ಬೆರೆ ।
ನಾಶವಕ್ಕೆ ಪೃಥಕ್ತ್ವ—ಮರುಳ ಮುನಿಯ ॥ ೪೬

## ಸರ್ವಾತ್ಮಭಾವ

ಏಕದಿನನೇಕಗಳು ಸಾಕಾರನಾಮಗಳು ।
ಲೋಕವಿದು ನೋಡೆ ನೀಂ [ಕೃತ್ಸ್ನದರ್ಶನದಿಂ] ॥
ಏಕದೊಳ್ ನೀನು ಸಾಕಲ್ಯವನ್ನನುಭವಿಸೆ ।
ಸಾಕಲ್ಯಯೋಗವದು—ಮರುಳ ಮುನಿಯ ॥ ೪೭

ಸರ್ವೋಹವಿಂದೆ ನಿರ್ಮೂಲಮಪ್ಪುದಹಂತೆ ।
ನಿರ್ವಿಕಾರದ ಶಾಂತಿ ನಿರಹಂತೆಯಿಂದೆ ॥
ನಿರ್ವಾಣದ ಶಾಂತಿಯಿಂದದು ಸರ್ವಸಮದೃಷ್ಟಿ ।
ಸರ್ವಾತ್ಮ್ಯವಾನಂದ—ಮರುಳ ಮುನಿಯ ॥ ೪೮

ಸಂತಾನ ಸಾವಿರಗಳೊಂದೆ ಬೀಜದೊಳಡಕ ।
ಸ್ವಾಂತವೊಂದರೊಳೆ ಭಾವ ಸಹಸ್ರವಡಕ ॥
ಸಾಂತ ನರದೇಹದೊಳನಂತ ಚೇತನವಡಕ ।
ಚಿಂತಿಸೀ ಸೂಕ್ಷ್ಮವನು—ಮರುಳ ಮುನಿಯ ॥ ೪೯

ಪುರುಷ ಪ್ರಕೃತಿಯುರ ಪರಸ್ಪರಾನ್ವೇಷಣೆಯೆ ।
ನಿರವಧಿಕ ವಿಶ್ವ ಜೀವ ವಿಲಾಸ ಜಲಧಿ ॥
ತೆರೆಯೊಂದು ನಾನಾಸಮುದ್ರದೊಳಗೆಂದಿರ್ಪ ।
ಸರಸತೆಯೆಂ ಸದ್ಗತಿಯೊ—ಮರುಳ ಮುನಿಯ ॥ ೫೦

ಆವಾವ ಜನ್ಮಂಗಳಜ್ಜಮುತ್ತಜ್ಜದಿರೊ ।
ಆವಿರ್ಭವಿವರಿಂದು ಮಗ ಮೊಮ್ಮರೆನಿಸಿ ॥
ಆವಗಂ ಸಾವಿರೂಟೆಯ ನೀರ್ಗಳಿಂ ನಮ್ಮ ।
ಜೀವನದಿ ಬೆಳೆಯುವುದೊ—ಮರುಳ ಮುನಿಯ ॥ ೫೧

ತನುವೇನು ಮನವೇನು ಘನವೇನು ರಸವೇನು ।
ಗುಣವೇನು ಜಡವೇನು ಜೀವಬಲವೇನು ॥
ಅನವಧಿಕ ಮೂಲ ಸ್ವಯಂಭೂತ ಚೈತನ್ಯ ।
ಧುನಿಯು ಶೀಕರವೆಲ್ಲ—ಮರುಳ ಮುನಿಯ ॥ ೫೨

ಮೂಲಚೇತನದ ಮೂಟೆಗಳೆಲ್ಲ ವಸ್ತುಗಳು ।
ಸ್ಥೂಲದಿಂ ಸೂಕ್ಷ್ಮಗಳು ಸೂಕ್ಷ್ಮದಿಂ ಸ್ಥೂಲ ॥
ಕಾಲ ದೇಶಾಸಂಗ ಪರಿವರ್ತ್ಯ ಜಡಜೀವ ।
ಮಾಲಾಪ್ರವಾಹವದು—ಮರುಳ ಮುನಿಯ ॥ ೫೩

ತೃಣ ಸಸ್ಯ ತರುಗಳಲಿ ಕನಕ ಕಬ್ಬಿಣಗಳಲಿ ।
ಮಣಿ ಮರಳು ಶಿಲೆಗಳಲಿ ಶುನಕ ಹರಿಣದಲಿ ॥
ಗುಣ ಶಕ್ತಿ ವಿವಿಧತೆಯುನನುವಂಶವಿರಿಸಿರ್ಪು—।
ದನ್ಯೋನ್ಯತೆಯ ಕಲಿಸೆ—ಮರುಳ ಮುನಿಯ ॥ ೫೪

## ಅನಾದಿ—ಅನಂತ

ಬತ್ತ ಗೊಬ್ಬರವಾಗಿ ನೆಲಕಿಳಿದು ಮಣ್ಣಾಗಿ ।
ಮತ್ತೆ ತಾಂ ತೆನೆಯೊಳೇಳ್ವಂತೆ ನರಕುಲದ ॥
ಸತ್ತ್ವ ಕಣವಿಲ್ಲಲ್ಲಿ ತಮಕಿಳಿದೊಡಂ ತಾನೆ ।
ಮತ್ತೆದ್ದು ಮೆರೆಯುವುದು—ಮರುಳ ಮುನಿಯ ॥ ೫೫

ಎಂತು ನಾಂ ಕಾಡಿದೊಡಮಿವನಳಿಯದುಳಿದಿರ್ಪನ್ ।
ಎಂತಪ್ಪ ಧೀರನಿವನೇನಮೃತಸಾರನ್ ! ॥
ಇಂತೆನುತೆ ಮರ್ತ್ಯರೊಳೆ ಪಂಥ ಹೂಡಿಹನು ವಿಧಿ ।
ಸಂತತ ಸ್ಪರ್ಧೆಯದು—ಮರುಳ ಮುನಿಯ ॥ ೫೬

ನಮ್ಮ ರವಿ ಭೂಗೋಲಗಳಿನಾಚೆ ನೂರಾರು ।
ನೂರ್ಮಡಿಯ ಬಲದ ರವಿ ಭೂಗ್ರಹಗಳಿಹುವು ॥
ಹೊಮ್ಮಿಸುವಳಿನ್ನೆಷ್ಟನೋ ಪ್ರಕೃತಿ ಮರಮರಳಿ ।
ಬ್ರಹ್ಮಶಕ್ತಿಯಪಾರ—ಮರುಳ ಮುನಿಯ ॥ ೫೭

ಜಗವಿಹುದನಾದಿಯದು ಮೊದಲಿಲ್ಲ ಕೊನೆಯಿಲ್ಲ ।
ಯುಗದಿಂದ ಯುಗಕೆ ಹರಿವುದು ಜೀವ ನದಿವೊಲ್ ॥
ಅಘಪುಣ್ಯಗಳ ಬೇರ್ಗಳೆಂದಿನಿಂ ಬಂದಿಹವೊ ।
ಬಗೆ ಮುಂದೆ ಗತಿಯೆಂತೊ—ಮರುಳ ಮುನಿಯ ॥ ೫೮

ಸಾವಿರ ಕುಲಂಗಳಿಂ ತಾಯ್ತಂದೆ ತಾಯ್‌ತಂದೆ ।
ಮಾವ ಮಾವಂದಿರಿಂದಗಣಿತಾದಿಗಳಿಂ ॥
ಜೀವವೊಂದುದಿಸಿಹುದು ಹೀರಿ ಸಾರಗಳನಿತ— ।
ನಾವನೆಣಿಸುವನದನು—ಮರುಳ ಮುನಿಯ ॥ ೫೯

## ಏಕ—ಅನೇಕ

ಏಕಮೊ ಅನೇಕಮೋ ಸದ್ವಸ್ತುವೆಣಿಸಲಿಕೆ ।
ಲೋಕದೊಳನೇಕವದು ಮೂಲದೊಳಗೇಕ ॥
ಸಾಕಲ್ಯದಿಂ ಭಜಿಸು ನೀನುಭಯುಗಳುನೆಂದುಂ ।
ಏಕದಿನನೇಕ ನೀಂ—ಮರುಳ ಮುನಿಯ ॥ ೬೦

ಇರುವುದೊಂದೋ ಎರಡೊ ಎರಡಂತೆ ಎಸೆವೊಂದೊ ।
ಮರೆಲು ಗಂಧಗಳೆರಡೊ, ಗಂಧವಿರೆದರಲು ಕಸ ॥
ಮೆರಗು ಮಣಿ ಬೇರೆಯೇಂ ಮೆರಗಿರದ ಮಣಿಯೆ ಶಿಲೆ ।
ಎರಡುಮಿರೆ ಪುರುಳೊಂದು—ಮರುಳ ಮುನಿಯ ॥ ೬೧

ಕಿಡಿಯುನುರಿಯಿಂದ ಬೇರೆಂದು ತೋರಿಸುತಿರ್ಪ ।
ಬೆಡಗು ಮಾಯೆಯದು ಗಾಳಿಯ ಬೀಸುತಿರಲು ॥
ನಡುಗಿಪ್ಪುದೆಲ್ಲವನು ಒಂದೆಡೆಯೊಳೆರಡೆಂದು ।
ಹುಡುಗಾಟವಾಗುಂಪುದು—ಮರುಳ ಮುನಿಯ ॥ ೬೨

ಗಂಗೆ (ತಾನೊಂದು) ನದಿ ಯುಮುನೆ ಬೇರೊಂದು (ನದಿ) ।
ಸಂಗಮದ(ವರೆಗೆ) ಬೇರ್ತನ ಪ್ರಯಾಗವರಂ ॥
ವಂಗದಾ ಅಬ್ಧಿಯುಲಿ ಗಂಗೆಯಾರ್ ತುಂಗೆಯಾರ್ ? ।
ಎಂಗಡಿಸಲಹುದೇನೊ ?—ಮರುಳ ಮುನಿಯ ॥ ೬೩

ಏಕದೊಳನೇಕವನನೇಕದೊಳಗೇಕವವ—।
ಲೋಕಿಪಂ ಪರಮ ತತ್ತ್ವಂ ಕಂಡನಾತಂ ॥
ಶೋಕಮವನಂ ಸೋಕದವನಿಗಿಲ್ಲಂ ಮೋಹ ।
ಸಾಕಲ್ಯ ದೃಷ್ಟಿಯದು—ಮರುಳ ಮುನಿಯ ॥ ೬೪

ತನುವಿಕಾರಗಳ ನಡುವಣ ಜೀವದೇಕತೆಯು ।
ಹೊನಲಿನೇಕತೆಯುನಲೆಸಾಲುಗಳ ನಡುವೆ ॥
ಇನಚಂದ್ರ ಪರಿವರ್ತನೆಗಳೊಳವರೇಕತೆಯು ।
ಮನಗಾಣಿಪುದು ಚಿತ್ತು—ಮರುಳ ಮುನಿಯ ॥ ೬೫

ನರಗಣ್ಯ ಭೇದಗಳ ಕಾಲ ದಿಗ್ದೇಶಗಳ ।
ಜರೆರುಜೆಗಳೆಲ್ಲ ವಿಕೃತಿಗಳ ಪಾರಿಸುತೆ ॥
ದೊರಕಿಪುದು ಜಗದ ನಾನಾತ್ವದೊಳಗೈಕ್ಯವಂ ।
ಸ್ಮರಣೆ ಚಿನ್ಮಹಿಮೆಯದು—ಮರುಳ ಮುನಿಯ ॥ ೬೬

ಜಗವಖಿಲವಿದನಾದಿ ಜೀವ ಜೀವವನಾದಿ ।
ಯುಗ–ಯುಗಕೆ ಭೇದವೇಂ ನಾಮರೂಪಗಳು ॥
ಬಗೆಬಗೆಯ ಗುಣ ನೀತಿ ನಯ ಸಂಪ್ರದಾಯಗಳ್ ।
ಮಿಗುವ ವಸ್ತುವದೊಂದೆ—ಮರುಳ ಮುನಿಯ ॥ ೬೭

ನಾನಾ ಸುಮ ಸ್ತೋಮದೊಳಡಂಗಿ ಮಲ್ಲಿಗೆಯು ।
ಕಾಣಬಾರದೆ ಕಣ್ಗೆ ಸೂಕ್ಷ್ಮ ನೋಡುವನಾ–।
ಘ್ರಾಣನಕ್ಕಪ್ಪಂತೆ ಲೀನನುಂ ವಿಶದನುಂ ॥
ನೀನಿರಿಳೆಬಾಳಿನೊಳು—ಮರುಳ ಮುನಿಯ ॥ ೬೮

## ವ್ಯಕ್ತ—ಅವ್ಯಕ್ತ

ವಸ್ತುವಿರುವುದದೊಂದು ಕಣ್ಗೆರಡೆನಿಪ್ಪುದದು ।
ವ್ಯಕ್ತ ಪ್ರಪಂಚವೊಂದವ್ಯಕ್ತವೊಂದು ॥
ನಿತ್ಯಮಾಯೆರಡು ಪೊಂದೆಂಬಂತೆ ಬಾಳ್ವವನು ।
ತತ್ತ್ವ ಪರಿಪೂರ್ಣನೆಲೊ—ಮರುಳ ಮುನಿಯ ॥ ೬೯

ಏಕ ತಾಂ ದ್ವಿಕವಾಗಿ ದ್ವಿಕವೆ ದಶ ಶತವಾಗಿ ।
ಸೋಕಲೊಂದಿನ್ನೊಂದ ನವರಚನೆಯಾಗಿ ॥
ಸ್ತೋಕಾಣುವೊಂದರಂಶ ಪರಂಪರೆಯು ಘರ್ಷ ।
ವೈಕೃತಂಗಳೆ ಸೃಷ್ಟಿ—ಮರುಳ ಮುನಿಯ ॥ ೭೦

ತರುಣಿಯಾ ಕೊರಳ ಮಣಿಯೆರಡು ಕಾಣ್ಬುದು ಕಣ್ಗೆ ।
ಸೆರಗು ಮುಚ್ಚಿರುವ ಸರ ದೊರೆವುದೂಹನೆಗೆ ॥
ಪರವಸ್ತು ಮಹಿಮೆಯಂತರೆ ತೋರುವುದು ಕಣ್ಗೆ ।
ಪರಿಪೂರ್ಣವದು ಮನಕೆ—ಮರುಳ ಮುನಿಯ ॥ ೭೧

ಕರಣ ಕಾರಕ ಮಿಶ್ರವೆಲ್ಲ ವಿಶ್ವಪದಾರ್ಥ ।
ಕ್ಷರದೇಹವೊಂದು ಅಕ್ಷರಸತ್ತ್ವವೊಂದು ॥
ಪರಿಮೇಯ ಯಂತ್ರಾಂಶ ಚೇತನಾಂಶಪಮೇಯ ।
ಹರವೆರಡಕೆರಡು ತೆರ—ಮರುಳ ಮುನಿಯ ॥ ೭೨

ಹಿಂದಿನ ವಿವೇಕಾಚಾರವಿಂದಿಗಪ್ರಕೃತವೆನೆ–।
ಲಿಂದಿನ ವಿವೇಕಾಚಾರ ಮುಂದಿಗೆಂತಹುವು ? ॥
ಎಂದೆಂದಿಗುಂ (ಸಂದ) ತತ್ತ್ವವೊಂದಲ್ತೆ ಅದ–।
ರಿಂದೆಲ್ಲವನು ನೋಡು—ಮರುಳ ಮುನಿಯ ॥ ೭೩

## ಸತ್ಯ

ನಿತ್ಯ ಮಂಗಳವಿರಲಿ ನಿತ್ಯ ಸಂತಸವಿರಲಿ ।
ನಿತ್ಯವೆದೆಯಿರಲಿ ತಾಳಲಿಕೆ–ತಳ್ಳಲಿಕೆ ॥
ಸತ್ಯ ನಿನಗಂತರಾತ್ಮಜ್ಯೋತಿ ಬೆಳಗಿರಲಿ ।
ಸತ್ಯ ಜಯ ಧರ್ಮ ಜಯ—ಮರುಳ ಮುನಿಯ ॥ ೭೪

ಜಯದ ಫಲ ನಿಜದಿ ನಿನ್ನೊಳಗೆ ಹೊರಗೇನಲ್ಲ ।
ನಿಯಮದಿಂ ಪಾಲಿಸಿದ ಸತ್ಯ ಧರ್ಮಗಳಿಂ ॥
ಲಯವಾಗೆ ಮಮತೆಯಾತ್ಮಂ ಬಲಿಯೆ ಸರ್ವತ– ।
ನ್ಮಯತೆಯನುಭವವೆ ಜಯ—ಮರುಳ ಮುನಿಯ ॥ ೭೫

ಒರೆಗಾಲದವಸರದಿ ದೊರೆತನ್ನವುಂಡೊಡೆಯು– ।
ಮರೆಸುತಿಹೆಯಲ್ತೇ ನೀ ಮೇಲುಣಿಸ ನೆನೆದು ॥
ಅರಿವಿಗೆಟುಕಿದ ಮತವನೇಣಿಯಾಗಿಸುತೇರಿ ।
ಪರಮ ಸತ್ಯವನಡರೊ—ಮರುಳ ಮುನಿಯ ॥ ೭೬

ನೃತ್ಯ ಲೀಲೆಯ ತೋರ್ಪ ಸತ್ತ್ವವದು ಸೌಂದರ್ಯ ।
ನಿತ್ಯ ನಿಶ್ಚಲಮಿರ್ಪ ಸತ್ತ್ವವದು ಸತ್ಯ ॥
ಸತ್ಯ ಸೌಂದರ್ಯಗಳ್ ಬ್ರಹ್ಮಮಾಯೆಗಳೊಡಲು ।
ಪ್ರತ್ಯೇಕಮವರಿರರೊ—ಮರುಳ ಮುನಿಯ ॥ ೭೭

ಸತ್ ಎನ್ನಲ್ ಇರುವಿಕೆಯುದಸ್ತಿತ್ವ ಬರಿ ಇರ್ಕೆ ।
ಎತ್ತೆತ್ತಲ್ ಎಂದೆಂದುಂ ಇರುವುದದು ಸತ್ಯ ॥
ಗೊತ್ತಿಲ್ಲ ಗುರಿಯಿಲ್ಲ ಗುರುತು ಗೆಯ್ಮೆಗಳಿಲ್ಲ ।
ಸತ್ ಒಳ್ಮೆಯೊಳ್ಳಿತದು—ಮರುಳ ಮುನಿಯ ॥ ೭೮

### ಸ್ವಾನುಭೂತಿಯೆ ಸತ್ಯ

ಬಾನೊಳೆಲರಾಟಕ್ಕೆ ಸಿಕ್ಕಿರ್ಪ ಧೂಳುಕಣ ।
ಭಾನುವಿಂಗೆಷ್ಟು ಸನಿಹವದೆಷ್ಟು ದೂರ ॥
ಆನುಭಾವದ ಮಾತು ಊಹೆ ತರ್ಕಗಳಲ್ಲ ।
ಸ್ವಾನುಭೂತಿಯೆ ಸತ್ಯ—ಮರುಳ ಮುನಿಯ ॥ ೭೯

ಅನುಭವವದೇನು ? ನಿನ್ನುದ್ದಿಷ್ಟವಸ್ತುವನು ।
ಮನವಪ್ಪಿಕೊಂಡಿಹುದು ಹೊರಗೊಳಗೆ ಸರ್ವಂ ॥
ತನುವೊಳಿಹ ರಕ್ತಮಾಂಸಗಳ ತೊಗಲಿನವೋಲು ।
ಮನ ಓಡಿಯಲನುಭವವೊ—ಮರುಳ ಮುನಿಯ ॥ ೮೦

ಒಮ್ಮೊಮ್ಮೆ ಸತಿಪತಿಯರಿರ್ವರಾಚರಿತದಲಿ ।
ಒಮ್ಮೊಮ್ಮೆಯುವರೇಕಮೂರ್ತನವನುಳಿದು ॥
ಬ್ರಹ್ಮ ಜೀವರ್ಕಳಂತಿರರೆ ವೈಕಲ್ಯದಲಿ ।
ಮರ್ಮವನುಭವವೇದ್ಯ—ಮರುಳ ಮುನಿಯ ॥ ೮೧

ಹೃದಯವೊಂದರಿನಲ್ತು ಮೇಧೆಯೊಂದರಿನಲ್ತು ।
ವಿದಿತವಪ್ಪುದು ನಿನಗೆ ತಾರಕದ ತತ್ತ್ವಂ ॥
ಹದದಿನಾ ಸಾಧನೆಗಳೆರಡುಮೊಂದಾಗೆ ಬೆಳ- ।
ಕುದಿಸುವುದು ನಿನ್ನೊಳಗೆ—ಮರುಳ ಮುನಿಯ ॥ ೮೨

ಇನ್ನೊಂದನೆಳಸಗೊಡದನ್ಯವನು ಮರೆಯಿಪುದು ।
ತನ್ನನೇ ತಾಂ ನೆನೆಯದಂತೆ ಕರಗಿಪುದು ॥
ಪೂರ್ಣದೊಳ್ ಪ್ರೇಮಿಯುಂ ಪ್ರಿಯದೊಳೊಂದಾಗಿಪುದು ।
ಚೆನ್ನನುವುದದ್ವೈತ—ಮರುಳ ಮುನಿಯ ॥ ೮೩

ಸೋಽಹಮನುಭವಿಯಹಾಗು ದುರ್ಲಭವದೆನ್ನೆ ದಾ- ।
ಸೋಽಹಮನುಭವಿಯಹಾಗು ವಿಭು ವಿಶ್ವಗಳೊಳು ॥
ಮೋಹ ಪರಿಯುವುದಂತೊ ಇಂತೊ ಎಂತಾದೊಡೇಂ ।
ರಾಹು ಬಿಡೆ ರವಿ ಪೂರ್ಣ—ಮರುಳ ಮುನಿಯ ॥ ೮೪

ಮರೆಗಟ್ಟಿ ಕಾಂಡ ಬುಡದಲಿ ಮೇಲೆ ಕೊಂಬೆಯಲಿ ।
ಮರಲ ತಳೆವುದು ಚಿಗುರಿ ಕಾಷ್ಠತೆಯ ದಾಟಿ ॥
ನರನಂತು ದೇಹಿತೆಯಂ ಮೃಚ್ಛಿಲಾಂಶವ ಮೀರೆ ।
ಪರಮಾರ್ಥಸುಮದೆ ಕೃತಿ—ಮರುಳ ಮುನಿಯ ॥ ೮೫

ಸಾಧಕಪದಂ ದ್ವೈತ ಸಿದ್ಧಪದಮದ್ವೈತ ।
ರೋಧಗಳ ನಡುವೆ ನದಿ ಮುಂಬರಿಯಲುದಧಿ ॥
ದ್ವೈಧವಿರೆ ವಿರಹ ಪ್ರಿಯೈಕ್ಯತಾನದ್ವೈಧ ।
ಭೇದ ಬರಿ ಭಾವ ದಶೆ—ಮರುಳ ಮುನಿಯ ॥ ೮೬

ಶ್ರೌತಾರ್ಥಮೇ ಹೃದನುಭೂತಾರ್ಥಮಾದಂದು ।
ಮಾತಿಗೆಟುಕದ ಸತ್ಯದರ್ಶನಂ ನಿನಗೆ ॥
ಜ್ಯೋತಿ ನಿನ್ನೊಳಗೆ ಹೃದಯಾಂತರಾಳದೊಳಿಹುದು
ಆತುಮದ ತೇಜವದು—ಮರುಳ ಮುನಿಯ ॥ ೮೭

ಇರುವುದೇ ಸತ್ಯವದು ವಿವಿಧವಪ್ಪುದೆ ಲೋಕ–।
ವದನರಿವುದೇ ಆತ್ಮನೆಲ್ಲವನು ಧರಿಪ ॥
ಪರವಸ್ತುವೇ ಬ್ರಹ್ಮವದ ಸ್ಮರಿಸಿ ಬದುಕಲಾ ।
ಪರಮಪದವಿರುವಿಕೆಯೆ—ಮರುಳ ಮುನಿಯ ॥ ೮೮

## ಭುವನವೇ ಶಿವವಾರ್ತೆ

ಎವೆಯಿಡದೆ ನೋಡು, ಮರ ಮರವು ಕರೆವುದು ನಿನ್ನ ।
ಕಿವಿಯನಾನಿಸು, ಕಲ್ಲು ಕಲ್ಲೊಳಂ ಸೊಲ್ಲು ॥
ಅವಧರಿಸು ಜೀವ ಜೀವವುಮುಲಿವುದೊಂದುಲಿಯ ।
ಭುವನವೇ ಶಿವವಾರ್ತೆ—ಮರುಳ ಮುನಿಯ ॥ ೮೯

ಸಿಕ್ಕಿಲ್ಲವವನೆಮ್ಮ ಕೈ ಕಣ್ಣಿಗೆಂಬವರು ।
ಸಿಕ್ಕಿರ್ಪುದರೊಳವನ ಕಾಣದಿಹರೇಕೆ ? ॥
ಲೆಕ್ಕಿಲ್ಲದ ವೊಡಲ ಪೊತ್ತನನು ಕಂಡುದರೊಳ್ ।
ಪೊಕ್ಕು ನೋಡದರದೇಕೆ ?—ಮರುಳ ಮುನಿಯ ॥ ೯೦

ಶಿಲೆಯೊ ಮೃತ್ತಿಕೆಯೊ ಸೌಧವೊ ಕಾಲುಕಸಧೂಳೊ ।
ಬಳುಕು ಲತೆಯೋ ಮರನೊ ಒಣ ಸೌದೆ ತುಂಡೋ ॥
ಲಲಿತ ಸುಂದರಿಯೊ ಸಾಧುವೋ ವೀರಸಾಹಸಿಯೊ ।
ಚಲವೊ ಜಡವೋ (ಶಿವನೆ)—ಮರುಳ ಮುನಿಯ ॥ ೯೧

ನಾನೆನುವುದೊಂದೊ ಅಥವಾ ನೀನೆನುವುದೊಂದೊ ।
ನಾನು ನೀನುಗಳಿರದ ಅದು ಎನುವುದೊಂದೋ ॥
ಏನೊ ಎಂತಾನುಮೊಂದೇ ಎಲ್ಲ ; ಆ ಒಂದನ್ ।
ಆನು ನೀನೇಗಳುಂ—ಮರುಳ ಮುನಿಯ ॥ ೯೨

ಪ್ರಾಪಂಚಿಕದ ಚಕ್ರ ಪರಿವರ್ತನ ಕ್ರಮಗ-।
ಳಾಪಾತ ನಿಯತಂಗಳಾಳವರಿತವರಾರ್ ॥
ಮಾಪನಾತೀತನಿತ್ಯಸ್ವೈರಸೂತ್ರದಿಂ ।
ವ್ಯಾಪಿತಂ ಜಗವೆಲ್ಲ—ಮರುಳ ಮುನಿಯ ॥ ೯೩

ವನದ ಮಧ್ಯದಿ ನಿಂತು ನೋಡು ದೆಸೆದೆಸೆಯೊಳಂ ।
ದಿನದಿನದಿ ಗಿಡಗಿಡದಿ ಹೊಸಹೊಸತು ಚಿಗುರು ॥
ಕ್ಷಣವಿಕ್ಷಣಮುಮಂತು ಪರಸತ್ತ್ವಮೆತ್ತಲುಂ ।
ಜನಮ ತಾಳುತ್ತಿಹುದು — ಮರುಳ ಮುನಿಯ ॥ ೯೪

ಇರುವುದೊಂದೆರೆಡೆನಿಸಿ ತೋರುವುದು ಲೋಗರ್ಗೆ।
ಇರದೆ ತೋರುವುದೆಂತು ತೋರದಿರವೆಂತು ? ॥
ಪರತತ್ತ್ವ ಲೋಕಂಗಳೆರಡುಮೊಂದೇ ವಸ್ತು।
ಮರದ ಬೇರೆಲೆಯವೊಲು—ಮರುಳ ಮುನಿಯ ॥ ೯೫

ಮೂಲಸತ್ತ್ವಬ್ರಹ್ಮವೇಕ ಬಹುವಾ ವೇಷ।
ಕಾಲದೇಶಂಗಳಿಂ ಬ್ರಹ್ಮವಾತ್ಮವಹ ವೇಷ॥
ತಾಳಿ ದೇಹವನಾತ್ಮ ಜೀವನೆನಿಪುದು ವೇಷ।
ಲೀಲೆ ವೇಷವೋ ವಿಶ್ವ—ಮರುಳ ಮುನಿಯ॥ ೯೬

ಖೇಲನ ವ್ಯಾಪಾರವೀ ಜಗದ್ವಿಸ್ತಾರ।
ಮೂಲಕಾರಣನಿದಕೆ ಪೂರ್ಣಸ್ವತಂತ್ರಂ॥
ಲೀಲೆಗೆಂದೀ ಚಿತ್ರಮೋಹವೈರಾದಿಗಳ।
ಜಾಲವಂ ರಚಿಸಿಹಂ—ಮರುಳ ಮುನಿಯ॥ ೯೭

## ಜಗವೆಲ್ಲ ಶಿವಲೀಲೆ

ಜಗವೆಲ್ಲ ಶಿವಲೀಲೆ ಭಗವದರ್ಥದ ಲೀಲೆ।
ಖಗಲೀಲೆ ಮೃಗಲೀಲೆ ಕ್ರಿಮಿಕೀಟಲೀಲೆ॥
ನಗ ನದೀ ನದ ಲೀಲೆ ಮೇಲೆ ಮನುಜರಲೀಲೆ।
ಅಗಣಿತದ ಲೀಲೆಯಿದು—ಮರುಳ ಮುನಿಯ॥ ೯೮

ಅವನಿವನ ನೀನವನ ನಾನಿವನ ನೀನೆನ್ನ।
ಸವರಿ ಮೈಮರೆಸುತಿರೆ ತಿವಿದುರುಬಿಸುತಿರೆ॥
ಅವಗುಂಠಿತನದೊರ್ವನೀಕ್ಷಿಸುತೆ ನಗುತಿಹನು।
ಶಿವಲೀಲೆ ನಮ್ಮ ಬಾಳ್—ಮರುಳ ಮುನಿಯ॥ ೯೯

ಲೀಲೆಯೆಂದು ಬರಿಲೀಲೆ ಬರಿಬನದ ಬರಿಯಾಟ ।
ಸೋಲಿಲ್ಲ ಗೆಲವಿಲ್ಲ ಚಿಂತೆಯೇನಿಲ್ಲ ॥
ಮೂಲಕರ್ತನ ನೈಜ ವೈಭವದ ವಿಸ್ತಾರೆ ।
ಜಾಲಶಕ್ತಿವಿಲಾಸ—ಮರುಳ ಮುನಿಯ ॥ ೧೦೦

ಜೀವಕಂ ಜೀವಕಂ ಸ್ನೇಹದಿನೊ ವೈರದಿನೊ ।
ಭಾವರಜ್ಜುವ ಕಟ್ಟಿ ಜಾಲಗಳ ನೆಯ್ದು ॥
ನೋವಿಂದೆ ಸಂತಸದಿ ಬಾಯ್ಬಿಡಿಸಿ ನೋಡುವಾ ।
ದೈವದ ಮಹಾಲೀಲೆ—ಮರುಳ ಮುನಿಯ ॥ ೧೦೧

ತಳಮಳಿಸಿ ತ್ರಿಗುಣಮಿರೆ ಲೋಕಜೀವನ ಲೀಲೆ ।
ಅಲುಗುತ್ತಲಲೆಯಿರಲ್ ಕಡಲಿನ ಮಹತ್ತ್ವ ॥
ಜಲಧಿ (ವೀತತ) ರಂಗಮಿರೆ ನೋಳ್ಪರಾರ್ (ಅದನು) ।
ಚಲನೆಯೇ ಲೀಲೆಯೆಲೊ—ಮರುಳ ಮುನಿಯ ॥ ೧೦೨

ಲೀಲೆಯೋ ಜಗವೆಲ್ಲ ಲೋಕನಾಟಕ ಲೀಲೆ ।
ಕಾಲವಶವೆಲ್ಲಮುಂ ಕಾಲಮಾರುತನ ॥
ಏಳಿಸುತ ಬೀಳಿಸುತ ಮನುಜಮಾನಸಗಳಲಿ ।
ಚಾಲಿಪಂ ತ್ರಿಗುಣಗಳ—ಮರುಳ ಮುನಿಯ ॥ ೧೦೩

ಶಾಶ್ವತಾಕಾಶದಲ್ಲಿ ನಶ್ವರದ ನಕ್ಷತ್ರ ।
ವಿಶ್ವಮೂಲಂ ಸತ್ಯ ಬಾಹ್ಯದೊಳು ಮಿಥ್ಯೆ ॥
ಈಶ್ವರನ ನಿಜಸಾಮ್ಯ ಮಾನುಷ್ಯ ವೈಷಮ್ಯ
ವಿಶ್ವಸಿತ ಲೀಲೆಯಿದು—ಮರುಳ ಮುನಿಯ ॥ ೧೦೪

ಭುವನ ಜೀವನವೆಲ್ಲ ಶಿವನ ಲೀಲಾರಂಗ ।
ಅವನು ಶಿವನಿವನು ಶಿವ ಶಿವ ನೀನು ನಾನು ॥
ತವಕಪಡಿಸುವ ನಮ್ಮ ಕೆರಳಿಸುವ ಕುಣಿಯಿಸುವ ।
ಭವವೆಲ್ಲ ಶಿವಲೀಲೆ—ಮರುಳ ಮುನಿಯ ॥ ೧೦೫

ಸುವಿಲಾಸ ಮೋಹಗಳ ಕುವಿಕಾರ ಭಾವಗಳ ।
ಕವಿತೆ ಸಂಗೀತಗಳ ಕೋಪತಾಪಗಳ ॥
ಅವಿವೇಕ ಘೋಷೆಗಳ ಸುವಿಚಾರ ಮೌನಗಳ ।
ಹವಣೆಲ್ಲ ಶಿವಲೀಲೆ—ಮರುಳ ಮುನಿಯ ॥ ೧೦೬

ನಿತ್ಯದ ಸ್ಪರ್ಧೆಯಂದು ಪರಮೇಷ್ಠಿ ಮನುಜರದು ।
ವ್ಯತ್ಯಸಿತ ಲೋಕ ಗತಿಯಿವರವರ ನಡುವೆ ॥
ಉತ್ತಮತೆಯನು (ಸೊಟ್ಟ) ಸೃಷ್ಟಿಯೊಳಗರಸಿಸುವ ।
ಕೃತ್ರಿಮವೆ ಶಿವಲೀಲೆ—ಮರುಳ ಮುನಿಯ ॥ ೧೦೭

## ಹೊರಳಾಟವೂ ಲೀಲೆ

ತೊರೆಯೊಂದು ಪರಬೊಮ್ಮ ತೆರೆಸಾಲು ಲೋಕಗಳು ।
ಪರಿದೇಳ್ದು ಬಿದ್ದೇಳ್ವುದೋ ತೆರೆಯ ಬಾಳು ॥
ಉರುಳಿದರ ಮತ್ತೇಳುವುದು ತೊರೆಯ ಜೀವಾಳ ।
ಹೊರಳಾಟವೇ ಲೀಲೆ—ಮರುಳ ಮುನಿಯ ॥ ೧೦೮

ಜಗವೆಲ್ಲ ಲೀಲೆ ಶಿವಲೀಲೆ ಶಾಶ್ವತ ಲೀಲೆ ।
ನಗುವಳುವು ಸೆಣಸು ಹುಚ್ಚಾಟವದು ಲೀಲೆ ॥
ಹಗುರವನು ಹೊರೆಮಾಡಿ ತಿಣುಕಾಡುವುದು ಲೀಲೆ ।
ರಗಳೆಯೇ ಲೀಲೆಯೆಲೊ—ಮರುಳ ಮುನಿಯ ॥ ೧೦೯

ಲೀಲೆಯೋ ಬರಿಲೀಲೆ ಸರ್ವತೋ ಲೀಲೆಯಿದು ।
ಮೂಲಕರ್ತನ ಲೀಲೆ ಜೀವಿಗಳ ಲೀಲೆ ॥
ಗೋಳುಗುದ್ದಾಟಗಳ ಬೆರೆತಪ್ಪ ವಿಧಿಲೀಲೆ ।
ಕೋಲಾಹಲದ ಲೀಲೆ—ಮರುಳ ಮುನಿಯ ॥ ೧೧೦

ಚೈತನ್ಯ ಲೀಲೆಯೊಳಗೇನುಂಟದೇನಿಲ್ಲ ।
ಜ್ಞಾತಮಜ್ಞಾತಂಗಳೂಹ್ಯಮದನೂಹ್ಯಂ ॥
ದ್ವೈತಮದ್ವೈತಂ ವಿಶಿಷ್ಟಾದ್ವೈತ ಭೇದಂಗ—।
ಳಾತನೊಳಗೈಕ್ಯವೆಲೊ—ಮರುಳ ಮುನಿಯ ॥ ೧೧೧

ಲೀಲೆಯಿಂ ಪಾರಾಗು ಲೀಲೆಯಿಂ ಮೇಲಾಗು ।
ಲೀಲೆಯೊಳಗೋಲಾಡು ಲೀಲೆಯಂ ನೋಡು ॥
ಲೀಲೆಯೊಳಚಾಲಕನು ಪಾಲಕನು ನೀನಾಗಿ ।
ಮೂಲೋಕದಾನಂದಿ—ಮರುಳ ಮುನಿಯ ॥ ೧೧೨

ತೇಲಾಡುತಿಹುದು ಗಾಳಿಯ ಪಟದವೊಲು ಲೋಕ ।
ಕಾಲವದಕಾಕಾಶ ನೋಳ್ಪಮತಿಯೆ ಧರೆ ॥
ನೂಲು ಕಾಯಕ, ನಿಯತಿ ಗಾಳಿ, ಮಾನಸ ವಿಕೃತಿ ।
ಲೀಲೆ, ಶಿವಸಂತೋಷ—ಮರುಳ ಮುನಿಯ । ೧೧೩

## ಶಿವನಿಗೆಲ್ಲವು ಮೆಚ್ಚು

ಅವನ ಕಣ್ಗವನ ಬಾಳ್ಕುಣಿದಾಟಗಳು ತಪ್ಪು।
ಇವನ ಕಣ್ಗವನಿರವುನೋಟಗಳು ಬೆಪ್ಪು॥
ಅವನವನಿಗವನವನ ಹುಚ್ಚಾಟದಲ್ಲಿ ನಚ್ಚು।
ಶಿವನಿಗೆಲ್ಲವು ಮೆಚ್ಚು—ಮರುಳ ಮುನಿಯ ॥ ೧೧೪

ವೈವಿಧ್ಯದಿಂ ಲೋಕವೈಕ್ಯದಿಂ ನಿರ್ಲೋಕ ।
ಧೀವಪುವಿಕಾಸದಲಿ ಗುಣವೃತ್ತಿಗಳಲಿ ॥
ಜೀವಧರ್ಮದಲಿ ನಾನಾತ್ವವಾತ್ಮಧ್ಯಾನ ।
ಕೈವಲ್ಯದಲಿ ಸಾಮ್ಯ—ಮರುಳ ಮುನಿಯ ॥ ೧೧೫

ರಸನೆಯೇನು ಕೆರಳಿಪನಿತುಂಟು ರುಚಿ ನಿನ್ನಯಾ ।
ಹಸಿವ ತೀರಿಪ್ಪುದಾರತೆಯಿಲ್ಲ ಜಗದಿ ॥
ವಿಷಮವಿರದೊಡೆ ಧಾತುಗಳ್ ಜಗದಿ ಸೃಷ್ಟಿಯಾ ।
ಕಸಬು ಸಾಗುವುದೆಂತೊ—ಮರುಳ ಮುನಿಯ ॥ ೧೧೬

ಮೆಣಸು ಹುಣಿಸೆಗಳ ಸವಿಗಳು ಬೇರೆಯಿಹುದಿರಲಿ ।
ಹುಣಿಸೆಯಿಂ ನಿಂಬೆ ಮಾವುಗಳ ಹುಳಿ ಬೇರೆ ॥
ಮನುಜನುಳಿದ ಪ್ರಾಣಿಯಿಂ ಬೇರೆ ತಾಂ ಬೇರೆ ।
ಗುಣದೊಳೋರೊರ್ವನುಂ—ಮರುಳ ಮುನಿಯ ॥ ೧೧೭

ನರಕುಲದಿ, ಕಿಂಪುರುಷರೆರ್ಧ ಕಿನ್ನರರೆರ್ಧ ।
ಪರಿರಂಭವಶ್ವತನುಗೆಂತು ನರಮುಖದಿ ? ॥
ತುರಗ ಮುಖಕೆಂತು ಚುಂಬನ ಪುರುಷತನುವಿರಲ್ ।
ಕರುಬೆ ಪಾಡಿರ್ವರಿಗೆ—ಮರುಳ ಮುನಿಯ ॥ ೧೧೮

ತಾರಂಗ ನೃತ್ಯಗತಿ ವಿಶ್ವಜೀವನ ವಿವೃತಿ ।
ಆರೋಹವವರೋಹವೊಂದಾಗಲೊಂದು ॥
ಸಾರೂಪ್ಯಸಮಜವತೆಯೆರಡು ತೆರೆಗಳ್ಗಿರದು ।
ಬೇರೆತನದಿನೆ ಸೊಗಸು—ಮರುಳ ಮುನಿಯ ॥ ೧೧೯

ಪುನರುಕ್ತಿ ಬಾರದೆಂದುಂ ಪ್ರಕೃತಿ ಕಂಠದಿಂ ।
ದಿನದಂತೆ ದಿನವಿರದದೊರ್ವ ನಿನನಿರೆಯುಂ ॥
ಇನನೆ ತಾಂ ಕ್ಷಣದಿಂ ಮರುಕ್ಷಣಕೆ ಸವೆಯುವನು ।
ಅಸಿತರತೆ ಮೇಲ್ಸ್ತೋರ್ಕೆ—ಮರುಳ ಮುನಿಯ ॥ ೧೨೦

ಭೇದ್ಯವಲ್ಲದ ನಾಭಿ ನೇಮಿಗಳು ಚಕ್ರಕ್ಕೆ ।
ಮಧ್ಯದರಗಳು ಮಾತ್ರ ತಾಂ ಬೇರೆ ಬೇರೆ ॥
ಎದ್ದು ಕಾಣುವುವಂತು ಜೀವಿಗಳು ಜಗದಿ ತ- ।
ವ್ಯಾದ್ಯಂತಗಳ ಮರೆತು—ಮರುಳ ಮುನಿಯ ॥ ೧೨೧

ಧಗೆಯಿಂದ ದೆಹಲಿ ಸೊರಗಿರೆ ಬೇಸಗೆಯೊಳಂದು ।
ಮುಗಿಲು ಶೃಂಗೇರಿಗಭಿಷೇಕವನೆ ಮಾಳ್ಕುಂ ॥
ದುಗುಡ ಸೊಗಗಳಿಗೊಂದು ನಂಟುಂಟು ನಯವುಂಟು ।
ಮುಗಿಲಹುದೆ ಧಗೆಯಿರದೆ—ಮರುಳ ಮುನಿಯ ॥ ೧೨೨

## ಜ್ಞಾನ-ವಿಜ್ಞಾನ

ಏನೇನೊ ನಡೆದಿಹುದು ವಿಜ್ಞಾನ ಸಂಧಾನ ।
ಮಾನುಷ್ಯ ಬಾಂಧವ್ಯವೊಂದು ಮುರಿದಿಹುದು ॥
ತಾನೊಡರ್ಚಿದ ಹೊನ್ನರಸವೆ ನರನ ಕೊರಳ್ಗೆ ।
ನೇಣಾಗಿಹುದು ನೋಡು—ಮರುಳ ಮುನಿಯ ॥ ೧೨೩

ಏನೇನೊ ನಡೆದಿಹುವು ಮಾನುಷ್ಯ ಸಿದ್ಧಿಯಲಿ ।
ಯಾನಗಳು ಯಂತ್ರಗಳು ರಸ ನಿರ್ಮಿತಿಗಳಂ ॥
ಭಾನುಗೋಲಕ್ಕೇಣಿಕಟ್ಟಲೆಳಸುವ ನರನು ।
ತಾನಿಳಿಯುತಿಹನೇಕೊ—ಮರುಳ ಮುನಿಯ ॥ ೧೨೪

ನರ್ತನಾವೇಶನದ ವಿಶ್ವಮೂರ್ತಿಯ ದೇಹ ।
ವರ್ತನೆಯ ಪರಿಕಿಪ್ಪೆನೆನುತೆ ನಿಜ ನಯನ ॥
ವರ್ತ್ಮವನು ವಿಜ್ಞಾನಿ ತೆರೆವನಿತ್ತರೊಳು ಪರಾ ।
ವರ್ತಿತವೊ ನಟ ಭಂಗಿ—ಮರುಳ ಮುನಿಯ ॥ ೧೨೫

ಸರಸತಿಯ ಸತ್ರ ಬಳಿಯಿರೆ ತೊರೆದು ದೂರದಾ ।
ಸಿರಿದೇವಿಯಂಗಡಿಯನರಸಿ ತಟವಟಿಸಿ ॥
ಹೊರ ಹೊಳಪಿನಾಸೆಯಿಂದೊಳಮಬ್ಬನಪ್ಪುವನು ।
ಕುರುಡನೇ ಕಂಡವನೊ—ಮರುಳ ಮುನಿಯ ॥ ೧೨೬

ಭೇದದ ಭ್ರಾಂತಿಯಿರೆ ಜೀವಕ್ಕೆ ಜಗತ್ಸಂಗ ।
ವೇದನೆಗಳಂತುದಿಸಿ ಮಾಯೆ ತೂಂಕಿಡುವಾ ॥
ಖೇದ ಪೋದಾಂದೋಲನಗಳಿನಾತ್ಮೋದ್ಬೋಧ ।
ಬೋಧೆಯಿಂ ಭ್ರಾಂತಿಲಯ—ಮರುಳ ಮುನಿಯ ॥ ೧೨೭

ಮನಸು ಮತಿಗಳುಮಂತೆ ಬೆಳೆವುವೊಂದು ಕ್ರಮದೆ ।
ಮನುಜರನುದಿನದ ಸಂಸರ್ಗ ಸಂಸ್ಕೃತಿಯಿಂ ॥
ಜನಿಸುವುವು ನೂತನ ಜ್ಞಾನ ನವಭಾವಗಳು ।
ಅನುಪೂರ್ವರೀತಿಯಲಿ—ಮರುಳ ಮುನಿಯ ॥ ೧೨೮

ಸಂಶಯವೆ ಸಾಜವಲ ಕಣ್ಪೋಗದೆಡೆಗಳಲಿ ।
ಅಂಶವನೆ ಪೂರ್ಣವೆಂದೆಣಿಸವೇನಲ್ಲಿ ॥
ಭ್ರಂಶವಿಲ್ಲದ ನಿಶ್ಚಯಕೆ ಶೋಧನೆಯೆ ದಾರಿ ।
ಸಂಶೋಧಕವೊ ಶಂಕೆ—ಮರುಳ ಮುನಿಯ ॥ ೧೨೯

ಸಂದೇಹಶಿಖಿಯಿರದೆ ಮತಿ ಪಕ್ವವೆಂತಹುದು ? ।
ಆಂದೋಳನವೆ ವಾಸ್ತುಶುದ್ಧಿ ನಿಶ್ಚಿತಕೆ ॥
ಅಂಧವಿಶ್ವಾಸಕಾತನುಭವಿಪ್ರಶ್ನೆ ಬಳಿ ।
ಸಂದಿಹುದು ಸತ್ಯಕ್ಕೆ—ಮರುಳ ಮುನಿಯ ॥ ೧೩೦

ಬರಿಯ ಕಣ್ಣಿಂದಣುವ ಪರಿಕಿಪನೆ ವಿಜ್ಞಾನಿ ।
ಕರಣವಾತಂಗೆ ಸೂಕ್ಷ್ಮದ ಕಾಚಯಂತ್ರ ॥
ವಿರಚಿಸಿಕೊ ನೀನಂತರಂಗಯಂತ್ರವನಂತು ।
ಪರತತ್ತ್ವ ದರ್ಶನಕೆ—ಮರುಳ ಮುನಿಯ ॥ ೧೩೧

ಅನಿಲಗತಿ ಜಲಧಾರೆ ದಿನಪರಶ್ಮಿಗಳಿಂದೆ ।
ಜನಕಾರ್ಯ ಯಂತ್ರಗಳ ನಿರವಿಸುವ ಚತುರರ್ ॥
ಮನುಜಹೃದಯೋದ್ವೇಗ ಶಕ್ತಿಯನು ಯಂತ್ರಕ್ಕೆ ।
ವಿನಿಯೋಜಿಸರದೇಕೆ ?—ಮರುಳ ಮುನಿಯ ॥ ೧೩೨

## ಜ್ಞಾನಿ – ಅಜ್ಞಾನಿ

ಜ್ಞಾನಿಯುಂ ಹೊರುವನಜ್ಞಾನಿ ವೊಲೆ ಸೃಷ್ಟಿಸಂ– ।
ತಾನಪಾಲನೆಯ ಕರ್ತವ್ಯ ಭಾರವನು ॥
ಬೋನಕಾಶಿಸಿ ದಾನಿಭಯದೆ ಹೊರುವವನೊರ್ವ ।
ಸಾನುಕಂಪೆಯಿನೊರ್ವ—ಮರುಳ ಮುನಿಯ ॥ ೧೩೩

ಮೋಹಪಾಶಗಳೆಳೆಯೆ ಮಮತೆಯಂಕುಶವಿರಿಯೆ ।
ಆಹುತಂ ತಾನಹಂ ಭವಶಿಖಿಗೆ ಮೂಢಂ ॥
ಸೋಽಹಮಭಿಮತದ ಸರ್ವಾತ್ಮತ್ವದಿಂ ಜಗಕೆ ।
ಸಾಹ್ಯವೀವಂ ಜ್ಞಾನಿ—ಮರುಳ ಮುನಿಯ ॥ ೧೩೪

ಸೃಷ್ಟಿಚರಿತೆಯನಾದಿ ಜೀವಯಾತ್ರೆಯನಾದಿ ।
ಶಿಷ್ಟಕರ್ಮದ ಜಟಿಲ ಸೂತ್ರಗಳನಾದಿ ॥
ನಷ್ಟವಹುವೀಯನಾದಿಭ್ರಾಂತಿ ಮೂಲಗಳು ।
ದೃಷ್ಟಾತ್ಮತತ್ತ್ವಂಗೆ—ಮರುಳ ಮುನಿಯ ॥ ೧೩೫

ಸಂಸಾರಿ ಬಾಹ್ಯದೊಳಗಾಂತರ್ಯದಿ ವಿರಾಗಿ ।
ಹಂಸೆ ಜೀವನದ ಪಾಲ್ನೀರ ಭೇದದಲಿ ॥
ಪಾಂಸು ಮಾತ್ರದಿ ಸಕಲ ವಿಶ್ವಸಂದರ್ಶಿ(ಸುವ) ।
ಅಂಶದಲಿ ಪೂರ್ಣದೃಶಿ—ಮರುಳ ಮುನಿಯ ॥ ೧೩೬

ಪ್ರೇಮ ಪರಿಚರ್ಯೆಗಳನುಳಿದ ಪಶುಕಾಮುಕತೆ ।
ಕಾಮನೀಯಕ ತಾರತಮ್ಯ ಮರೆತಾಶೆ ॥
ಭ್ರಾಮಗತಿಯೆ ಪ್ರಗತಿಯೆಂಬ ಮೂರ್ಖಶ್ರದ್ಧೆ ।
ಪಾಮರ ವಿಜೃಂಭವಿವು—ಮರುಳ ಮುನಿಯ ॥ ೧೩೭

## ಈಶ್ವರನು ನಿನ್ನೊಳಗೆ

ಇರುವುದೆಲ್ಲಕು ಮೊದಲು ಬೀಜವದು ಮೂಲವದು ।
ಬರುವುದದರಿಂದೆಲ್ಲ ಜಗ ಜೀವ ಗಾಳಿ ॥
ನೆರೆದು ಧರಿಸಿರುವುದದು ಪೊರೆವುದದು ಕರಗಿಪುದು ।
ಮರೆವುದದು ನಿನ್ನೊಳಗೆ—ಮರುಳ ಮುನಿಯ ॥ ೧೩೮

ಹುಟ್ಟದಿರುವನು ನೀನು ಸಾಯದಿರುವನು ನೀನು ।
ಹುಟ್ಟುಸಾವುಗಳಾಟವಾಡುವನು ನೀನು ॥
ಕೆಟ್ಟುದೊಳಿತುಗಳೆರಡುಮಂಟದಿರ್ಪನು ನೀನು ।
ಒಟ್ಟು ವಿಶ್ವವೆ ನೀನು—ಮರುಳ ಮುನಿಯ ॥ ೧೩೯

ನಾನು ನೀನವನು ತಾನೆನುತ ಗುರುತಿಸಿಕೊಳುವ ।
ಭಾನಶಕ್ತಿ ಸಮಾನವೆಲ್ಲ ಜೀವರಿಗಂ ॥
ನಾನಾ ಪ್ರಪಂಚಗಳನಂತೊಂದುಗೂಡಿಪಾ ।
ಜ್ಞಾನಸೂತ್ರವೆ ಬೊಮ್ಮ—ಮರುಳ ಮುನಿಯ ॥ ೧೪೦

ದೇವರೇಂ ಜೀವಕೋಟಿ ಸಮಷ್ಟಿಯನು ಬಿಟ್ಟು? ।
ಜೀವವೊಂದಿನ್ನೊಂದನರಿತು ಗುರುತಿಸುವಾ ॥
ಭಾವನಾ ಸಂಬಂಧ ಶಕ್ತಿ ಸೂತ್ರದ ಮುಂದೆ ।
ಆವಸಾಕ್ಷ್ಯವದೇಕೆ ?—ಮರುಳ ಮುನಿಯ ॥ ೧೪೧

ಪರವಸ್ತುವೊಂದು ತಾನೆರಡಾಗಿ ಲೀಲೆಯಲಿ ।
ಪುರುಷನೆಂದುಂ ಪ್ರಕೃತಿಯೆಂದುಮನ್ಯೋನ್ಯಂ ॥
ಅರಸುತ್ತೆ ಮರಸುತ್ತೆ ಸೇರುತಗಲುತಮಂತು ।
ಸರಸವಾಡುತ್ತಿಹುದೊ—ಮರುಳ ಮುನಿಯ ॥ ೧೪೨

ಸ್ವಚ್ಛಚೈತನ್ಯಸಾಗರದ ವೀಚಿಯೊ ನೀನು ।
ಸಚ್ಚಿದಾನಂದಸರಿದೂರ್ಮಿ ಕಣ ನೀನು ॥
ಅಚ್ಛೇದ್ಯ ದಿವ್ಯತರು ಸಮಪರಾಗವೊ ನೀನು ।
ಅಚ್ಯುತಾಮೃತಬಿಂದು—ಮರುಳ ಮುನಿಯ ॥ ೧೪೩

ಇಹನೊ ಇಲ್ಲವೊ ದೇವರಿರ್ದೊಡೇನಿರದೊಡೇಂ ।
ಅಹಮೆಂಬುದೊಂದು ನಿನ್ನೊಳಿ ನುಡಿವುದಲ್ತೆ ॥
ಇಹದಿ ನಾನಾನೆನ್ನುವೆಲ್ಲ ಚೈತನ್ಯ ತಾಂ ।
ಮಹದಾದಿ ದೈವವೆಲೊ—ಮರುಳ ಮುನಿಯ ॥ ೧೪೪

ಕೋಡೆರಡು ಚಂದ್ರಮಗೆ ನಡುವೆ ಕಪ್ಪಿನ ಕಣಿವೆ।
ನೋಡು ಹುಣ್ಣಿಮೆಯಂದು ತುಂಬಿಹುದು ಬಿಂಬ ॥
ಮೋಡವನು ತನಗೆ ತಾಂ ಮುಸುಕಿ ಕೊಂಡಾತ್ಮ ತಾ–।
ನಾಡುತಿಹುದೆರಡೆನಿಸಿ—ಮರುಳ ಮುನಿಯ ॥ ೧೪೫

ಸಾಸಿರೆ ಮೊಗಂಗಳಿಂ ಸಿಹಿಯುಣುತ ಕಹಿಯುಣುವ।
ಸಾಸಿರೆ ಮೊಗಂಗಳಿಂದಳುತ ನಗುನಗುತ ॥
ಸಾಸಿರದೊಡಲುಗಳಿಂ ಪಡುತ ಪಡಿಸುತ್ತಲಿಹ।
ಸಾಸಿರದೊಳೊರ್ವನಾರ್ ?—ಮರುಳ ಮುನಿಯ ॥ ೧೪೬

## ಜೀವಾತ್ಮ – ಪರಮಾತ್ಮ

ಇಹುದೆಸೆವು (ದಪ್ಪ) ದಾಕೃತಿಯು ತಳೆವುದು ಪೆಸರ।
ವಹಿಪುದೆಂಬೈದು ಗುಣ ಜೀವಲಕ್ಷಣಗಳ್ ॥
ಗ್ರಹಿಸು ಮೊದಲಿನ ಮೂರು ಬೊಮ್ಮನವು ಮಿಕ್ಕೆರಡು।
ಕುಹಕ ಮಾಯೆಯವೆಂದು—ಮರುಳ ಮುನಿಯ ॥ ೧೪೭

ನರತೆಯೇಂ ದೈವಾಂಶ ಜೀವಾಂಶ ಮಿಶ್ರಣಂ।
ಇರುವೆಲ್ಲದರ ಸಮಷ್ಟಿ ಜ್ವಾಲೆ ದೈವಂ ॥
ಉರಿಯಿಂದ ಹೊರಬಿದ್ದು ಕರಿಯಪ್ಪ ಕಿಡಿ ಜೀವ।
ಮರಳಿ ಕರಿಯುರಿಯಕ್ಕೆ—ಮರುಳ ಮುನಿಯ ॥ ೧೪೮

ಇರುವುದೆಂದೆಂದುಮದು ದಿಟದೊಳೊಂದೇ ಒಂದು।
ಮೆರೆವುದದು ಎತ್ತೆತ್ತಲುಂ ಲಕ್ಷ ಲಕ್ಷ ॥
ಸ್ಥಿರ ಸತ್ಯ ಚರ ಮಾಯೆ ಎರಡಿರುವವೊಲು ತೋರಿ।
ಇರುವುದು ಸ್ಥಿರವೊಂದು—ಮರುಳ ಮುನಿಯ ॥ ೧೪೯

ಇರುವಿಕೆಯೆ ಸತ್ ಅದಾಸ್ತಿಕತೆ ಸತ್ತತ್ತ್ವ—।
ವಿರಬೇಕದಿರ್ದರ್ ನಮ್ಮರಿವೆಟುಕಬೇಕು ॥
ಮರೆಯೊಳೇನಿಹುದೊ ಇಲ್ಲವೋ ಅರಿವರಾರ್ ।
ಸ್ಫುರಿತತತ್ತ್ವವೊ ಜೀವ—ಮರುಳ ಮುನಿಯ ॥ ೧೫೦

ವ್ಯವಹಾರಲೋಕದೊಡಗೂಡಿರುತ್ತದರೊಳಗೆ ।
ಅವಿಕಾರ ತತ್ತ್ವಂ ಸಂಸ್ಮೃತಿಯು ನೀಂ ಬೆರಸೆ ॥
ಭವ ಸಿನಗೆ ಬೊಂಬೆ ಶಿಶುಗಪ್ಪಂತೆ ಬರಿಲೀಲೆ ।
ಶಿವನೆ ಸಂಸಾರಿಯಲ—ಮರುಳ ಮುನಿಯ ॥ ೧೫೧

ನೀರು ಹೊಳೆಯಲಿ ಹರಿದು (ಹರಿದು) ಹೊಸಹೊಸದಹುದು ।
ಸೇರುವುವುಪನದಿಗಳು ನದಿಯು ಹರಿಯುತಿರೆ ॥
ಊರುವುದು ಹೊಸ ನೀರು ತಳದ ಒಳಗಿಹುದೂಟೆ ।
ತೀರದೂಟೆಯೊ ಆತ್ಮ—ಮರುಳ ಮುನಿಯ ॥ ೧೫೨

ನಾನಾ ವಿಕಾರ ಲೀಲೆಗಳ ತಾಂ ತಾಳುತ್ತ।
ತಾನೊಬ್ಬನೇ ನಿಶ್ಚಲಂ ಮೆರೆಯುತತ್ತ ॥
ಜ್ಞಾನಿಗೇ ತಾನೇಕ ಯೋಗತತ್ತ್ವವನೀವ ।
ದಾನಿಯಾ ಬ್ರಹ್ಮನೆಲೊ—ಮರುಳ ಮುನಿಯ ॥ ೧೫೩

## ಬ್ರಹ್ಮ – ಜಗತ್ತು

ಸಾಕಾರನಾಗದಿಹ ದೈವದಿಂದಾರ್ಗೇನು ? ।
ಬೇಕು ಬಡಜೀವಕ್ಕೆ ಸಂಗಡಿಗನೊರ್ವಂ ॥
ಶೋಕಾರ್ತನೆದೆಯುಲಿವ ಗೂಢ ಚಿಂತೆಗಳನೊಲಿ—।
ದಾಕರ್ಣಿಪನೆ ದೈವ ಮರುಳ ಮುನಿಯ ॥ ೧೫೪

ಒಗೆದು ನೀಂ ಬಾಳುವೊಡೆ ಜಗದ ರಚನೆಯ ನೋಡು ।
ಸಗಣಿ ಹಾಲುಗಳೆರಡು, ಕೊಡುವ ಗೋವೊಂದೆ ॥
ಅಗಣಿತದಿ ಗಣ್ಯ(ಮ)ಗಣ್ಯಮಗಣಿತದಿಂದ ।
ಜಗವೊಂದೆ ಬಹುರೂಪ—ಮರುಳ ಮುನಿಯ ॥ ೧೫೫

ಜಗಬೇಕು ಬ್ರಹ್ಮಕ್ಕೆ ಬೇಡದಿರೆ ಸೃಜಿಸುವುದೆ ? ।
ಬಗೆಬಗೆಯ ಜೀವಲೀಲೆಗಳದರ ಸರಸ ॥
ಜಗವ ತೊರೆಯೆಂಬವರೆ ನೀಂ ಬೆದಕುತಿಹುದೇನು ? ।
ಸಿಗದೆ ಕಣ್ಗದು ಜಗದಿ ?—ಮರುಳ ಮುನಿಯ ॥ ೧೫೬

ಇರುವುದದು ನೆರೆವುದದು ಭರಿಪುದದು ಪೊರೆವುದದು ।
ಅರಿವೆಲ್ಲವಲುಗೆಲ್ಲವಾರ್ಪೆಲ್ಲವದರಿಂ ॥
ತರಣಿ ಶಶಿ ತಾರೆಗಳು ಜಲವಗ್ನಿವಾಯುಗಳು ।
ಸ್ಫುರಿಪುವದರಿಂದೆಲ್ಲ—ಮರುಳ ಮುನಿಯ ॥ ೧೫೭

ಜನುಮ ಜನುಮಾಂತರಂಗಳ ಲೆಕ್ಕಗಳನಿಟ್ಟು ।
ಋಣವ ನಿನ್ನಿಂ ತೆರಿಸಿಕೊಳಲು ಕಾದಿರುವಾ ॥
ಗಣಿತಸೂತ್ರದ ಶೂರನೇಂ ಬೊಮ್ಮ ಬೇರೆ ಹಿರಿ—।
(ತನ ನಯು)ವವನದಿಲ್ಲ ?—ಮರುಳ ಮುನಿಯ ॥ ೧೫೮

ಮೇಯೆಗರ್ಭದೊಳೊಂದಮೇಯವಾವುದೊ ನಿಂತು ।
ಕಾಯಕವ ನಡಸುತಿರ್ಪುದು ವಿಶ್ವವಾಗಿ ॥
ಮಾಯೆಯುಡಿಗೆಯನುಟ್ಟು ತನ್ನ ತಾನೇ ಮರೆತು ।
ಆಯಸಂಗೊಳುತಿಹುದು—ಮರುಳ ಮುನಿಯ ॥ ೧೫೯

ವೈಣಿಕಂ ಶೇಷಣ್ಣ ತಾನೆಳೆದ ನಾದದಲಿ ।
ಲೀನನಾಗುತೆ ತಾನೆ ಮೈಯ ಮರೆತಂತೆ ॥
ತಾನೆ ಗೈದೀಜಗದ ನಗುವಳುಗಳೊಳು ತಾನೆ ।
ಆನಂದಿಪನಃ ಬೊಮ್ಮ—ಮರುಳ ಮುನಿಯ ॥ ೧೬೦

ಒಂದೆ ನಾಲಗೆ ನೂರು ಸವಿಗಳನು ಸವಿಯುವುದು ।
ಒಂದೆ ಮನ ನೂರೆಂಟು ಕನಸ ಕಾಣುವುದು ॥
ಒಂದೆ ಬೊಮ್ಮದಿನಃಣ್ಮವೊಂದೆ ಮಾಯೆಯಿನೆ ನಿ-।
ನ್ನಂದ ಕುಂದುಗಳೆಲ್ಲ—ಮರುಳ ಮುನಿಯ ॥ ೧೬೧

ಮರಳು ಬಿಸಿಲಕ್ಷಿಯೀತ್ರಯದೊಂದು ಸಂಸರ್ಗ ।
ಮರುವೊಳ್ ಮರೀಚಿಕಯನಾಗಿಪುದು ಮೃಗಕೆ ॥
ಸ್ಥಿರಬೊಮ್ಮ ಚರಮಾಯೆ ನಿನ್ನ ದೃಕ್ಕೋಣವಿವು ।
ನೆರೆಯೆ ವಿಶ್ವದ ಚಿತ್ರ—ಮರುಳ ಮುನಿಯ ॥ ೧೬೨

## ಬೆಲೆಯಾವುದಾತ್ಮಕೆ ?

ಅಲುಗದದಿರದ ಗಿರಿಯ ಮುಖ ಧೀರ ಗಂಭೀರ ।
ಕುಲುಕಿ ಬಳುಕುವ ಬಳ್ಳಿ ಸರಸದೊಯ್ಯಾರ ॥
ಬಲ ಘನತೆ ಸೇವ್ಯವೋ ಚಲುವೊಲವು ಸೇವ್ಯವೋ ? ।
ಬೆಲೆಯಾವುದಾತ್ಮಕೆಲೊ ?—ಮರುಳ ಮುನಿಯ ॥ ೧೬೩

ಸಂಕ್ಷೋಭಿತವನುಳಿದು ಲೋಕ ಜೀವಿತವೇನು ।
ಕಾಂಕ್ಷಿತವನುಳಿದು ಮಾನವ ಶಕ್ತಿಯೇನು ? ॥
ಧ್ವಾಂಕ್ಷ ಪ್ರಸಂಗವದು ನಡೆಗೆ ಸೃಷ್ಟಿಯ ಪಥದಿ ।
ಶಿಕ್ಷಿಸಿಕೊ ನಿನ್ನ ನೀಂ—ಮರುಳ ಮುನಿಯ ॥ ೧೬೪

ಸತ್ಯವೊಂದನೆ ಕೇಳ್ವ ಹಟದ ನೆವದಿಂ ಹೆರರ ।
ಕುತ್ಸಿತವ ಹೇಳಿಸು (ತೊಳಗೆ) ನಗುವರಿರರೆ ? ॥
ಪ್ರತ್ಯಕ್ಷಕಳುಕುವಾಶೆಗಳು ಮನಸಿನ ಕುಳಿಯು ।
ಗುಪ್ತದಿಂ ಚೇಷ್ಟಿಸವೆ ?—ಮರುಳ ಮುನಿಯ ॥ ೧೬೫

ಅರೆದೈವವರೆದೈತ್ಯ ನರನೆನಿಪ್ಪ ವಿಚಿತ್ರ ।
ಧುರರಂಗಮವರೀರ್ವರಿಗೆ (ಮರ್ತ್ಯ) ಹೃದಯ ॥
ತೆರೆಮರೆಯೊಳಿರುತವರು ಸಭ್ಯವೇಷದ ಭಟರ ।
ಹರಿಬ ತಿಳಿಸುವುದುಂಟು—ಮರುಳ ಮುನಿಯ ॥ ೧೬೬

ಗುಣ ಬೇರೆ ಬಲ ಬೇರೆ ಗುರಿ ಬೇರೆ ರುಚಿ ಬೇರೆ ।
ಋಣ ಸೂತ್ರ ಗತಿ ಬೇರೆ ಪೂರ್ವಕಥೆ ಬೇರೆ ॥
ಮನುಜ ಮನುಜಂಗಮಿಂತಾತ್ಮಯೋಗ್ಯತೆ ಬೇರೆ ।
ಅನುವರಿಯೆ ಸಾರ್ಥಕ್ಯ—ಮರುಳ ಮುನಿಯ ॥ ೧೬೭

## ಬರಿಯ ಮಾತಿನಿಂದೇನು ?

ದ್ವೈತಂ ವಿಶಿಷ್ಟದದ್ವೈತಮದ್ವೈತಮಿವು ।
ಮಾತೊ ಬರಿದಹ ಮಾತೊ ನಿನಗೆ ಹೃದಯಾನು- ॥
ಭೂತಮಿಹವಾರ್ತೆಯೋ ಜೀವನೀತಿಯ ತೋರ್ಪ ।
ಜ್ಯೋತಿಯೋ ಜೀವನದಿ—ಮರುಳ ಮುನಿಯ ॥ ೧೬೮

ದ್ವೈತಮದ್ವೈತಂ ವಿಶಿಷ್ಟದದ್ವೈತಮಿವು ।
ಮಾತೊ ಅನುಭೂತಿಯೋ ? ಒಳಗರಸಿ ನೋಡು ॥
ಖ್ಯಾತಿಗಾಯಿತು ತರ್ಕವಾಕ್ಯಾರ್ಥಗಳ ಗಡಣೆ ।
ನೀತಿ ಜೀವಿತಕಿರಲಿ—ಮರುಳ ಮುನಿಯ ॥ ೧೬೯

ಕಾಯ ಭೋಗೈಶ್ವರ್ಯ ಯಶಗಳೊಳನಾಸಕ್ತಿ ।
ನ್ಯಾಯ ಧರ್ಮೋದ್ಧಾರದಲ್ಲಿ ಸಮಸಕ್ತಿ ॥
ಸ್ವೀಯಶಾತ್ಮ ಸರ್ವಾತ್ಮವೆನ್ನುವದ್ವಯ ವೃತ್ತಿ ।
ನೇಯಂಗಳಿವು ನಿನಗೆ—ಮರುಳ ಮುನಿಯ ॥ ೧೭೦

ಭಯದಿ ನಿರ್ಭಯವೀವ ದೈವಚಿಹ್ನೆಯದೊಂದು ।
ದಯಿತೆಯೊರ್ವಳು ಭವದ ಹೊರೆಯ ಪಾಲ್ಗೊಳಲು ॥
ನಿಯತವೃತ್ತಿಯದೊಂದು ದಿನದಿನದ ಭತ್ಯಕ್ಕೆ ।
ತ್ರಯದೆ ಭಾಗ್ಯವೊ ಬಾಳು—ಮರುಳ ಮುನಿಯ ॥ ೧೭೧

ಧೀಯುಕ್ತಿಯೊಂದಲ್ಲ, ಹೃದ್ಭಕ್ತಿಯೊಂದಲ್ಲ ।
ಮಾಯೆಯಂ ಪರಿದು ತತ್ತ್ವವ ತೋರ್ಪ ಬೆಳಕು ॥
ಆಯೆರಡು ಕಣ್ಗಳೊಂದಾಗೆ ಮೂರನೆಯ ಕಣ್ ।
ಗೇಯಂವನಂ ಕಂಡೀತೊ—ಮರುಳ ಮುನಿಯ ॥ ೧೭೨

## ಒಣತರ್ಕದಿಂದೇನು ?

ಆದಿಕವಿಗಳ ವಿಶ್ವಸತ್ಯದೃಷ್ಟಿಯಿನೊಗೆದ ।
ವೇದನದಿ ಮೂರುಕವಲಾಯ್ತು ಟೀಕೆಗಳಿಂ ॥
ರೋದಿಸುವ ವೈರಾಗ್ಯ, ಬೋಧೆಯುಗಲಿದ ಕರ್ಮ- ।
ವಾದದೊಣ ರಗಳೆಯವು—ಮರುಳ ಮುನಿಯ ॥ ೧೭೩

ನಿಗಮರ್ಷಿಗಳ ಜೀವನೋತ್ಸಾಹಭರವೆಲ್ಲಿ ? ।
ಜಗ ಮಣ್ಣು ಬಾಳ್ಗಾಳಿಯೆನುವ ನಾವೆಲ್ಲಿ ? ॥
ಭಗವದ್ವಿಲಾಸದಲಿ ಭಾಗಕನುಗೊಡದನು ।
ಮಗುವೆಂತು ಮನುಕುಲಕೆ—ಮರುಳ ಮುನಿಯ ॥ ೧೭೪

ಪರಿಪರಿಯಂ ಮೃಷ್ಟಾನ್ನ ಭಕ್ಷ್ಯಭೋಜ್ಯಗಳು ತಾ- ।
ವರಗಿ ರಕ್ತಾದಿ ಬೆರೆಯದಿರೆ ಪೀಡೆ ಪೊಡೆಗೆ ॥
ಬರಿಯೋದು ಬರಿತರ್ಕ ಬರಿಭಕ್ತಿಗಳುಮಂತು ।
ಹೊರೆಯೆ ಅರಿವಾಗದೊಡೆ—ಮರುಳ ಮುನಿಯ ॥ ೧೭೫

ಕತ್ತೆ ಮೈ ಹೊರೆತಕ್ಕೆ ನವಿಲ ಮೈ ಮೆರೆತಕ್ಕೆ ।
ಹೊತ್ತು ತರಲಾದೀತೆ ನವಿಲು ಭಾರಗಳ ॥
ನೃತ್ಯಕ್ಕೆ ಗೆಜ್ಜೆ ತೊಡುವುದೆ ಕತ್ತೆ ? ಧರ್ಮಗಳ ।
ಗೊತ್ತು ಗುಣಯುಕ್ತಿಯಿನೊ—ಮರುಳ ಮುನಿಯ ॥ ೧೭೬

ಹೃದಯಕಾನುಭವ ಹಿರಿದೊ ? ಬುದ್ಧಿಸಾಹಸ ಹಿರಿದೊ ? ।
ಅಧಿಕನೇಂ ಶಿವನೊ ? ವಿಷ್ಣುವೊ ? ಮೂರ್ಖತರ್ಕ ॥
ಹದದಿನವು ಕಣ್ಣೆರಡರಂತೊಂದುಗೂಡಿದಂ- ।
ದುದಿಸುವುದು ಪರಮಾರ್ಥ—ಮರುಳ ಮುನಿಯ ॥ ೧೭೭

ಒಂದೊಡಲು ನಿಂದಿರ್ಪುದೆರಡು ಕಾಲ್ಗಳ ಮೇಲೆ ।
ಸಂದೇಹವುತ್ತರಗಳೆರಡರಿಂ ಮತವು ॥
ದ್ವಂದ್ವಕಿಂತೊದಗದಿಹ ತರ್ಕವೇಂ ಸಿದ್ಧಾಂತ ? ।
ಗೊಂದಲವೊ ಬರಿವಾದ—ಮರುಳ ಮುನಿಯ ॥ ೧೭೮

ನೂರು ನೂರ್ಬೇರೆ ಬೇರ್ ಬೇರು ನಾರ್ ಮತ ಲತೆಗೆ ।
ಪೂರ್ವಿಕೋಕ್ತ್ಯಾಚಾರ ಸಂಪ್ರದಾಯಗಳು ॥
ಶಾರೀರ ಮಾನಸಿಕ ಬುದ್ಧಿಯುಕ್ತ್ಯನುಭವವು ।
ಪೂರೆ ಸಾಗದು ತರ್ಕ—ಮರುಳ ಮುನಿಯ ॥ ೧೭೯

ದೃಶ್ಯವೆಲ್ಲಂ ನಶ್ಯವೆಂಬಂತಿರೆಯುಮೀ–।
ದೃಶ್ಯಮೀರ್ಪನ್ನಮದು ದ್ರಷ್ಟವ್ಯಮಲ್ತೆ ॥
ಸಸ್ಯವಳಿದೊಡಮದರ ಫಲ ನಿನ್ನ ಜೀವಿತಕೆ ।
ರಸ್ಯಾನ್ನವಾಯಿತಲ—ಮರುಳ ಮುನಿಯ ॥ ೧೮೦

## ನೆಡು ಮನವನದರೊಳಗೆ

ತಡೆಯಿರದೊಡತ್ತಿತ್ತ ಪರಿದಾಡುವುದು ನೀರು ।
ಎಡೆಯು ಗೊತ್ತೊಂದಿರದ ನರಮನವುಮಂತು ॥
ಗುಡಿಯೆಂಬುದಿನ್ನೇನು ? ನಿನ್ನಾತ್ಮಕದು ಕೇಂದ್ರ ।
ನೆಡು ಮನವನದರೊಳಗೆ—ಮರುಳ ಮುನಿಯ ॥ ೧೮೧

ನಾನು ನಾನೆಂದು ನಿನ್ನೊಳುಸಿರ್ವ ಚೇತನವ ।
ಭಾನು ಶಶಿಗಳ ಮೀರ್ದ ವಿಶ್ವಚೇತನಕೆ ॥
ಧ್ಯಾನಸೂತ್ರದೆ ಗಂಟನಿಡುವ ಪ್ರತೀಕ ಸಂ–।
ಧಾನವೇ ಪೂಜೆಯೆಲೊ—ಮರುಳ ಮುನಿಯ ॥ ೧೮೨

ನಾನು ನಾನೆನುವ ನಿನ್ನಂತರಾತ್ಮದ ಗಂಗೆ ।
ನಾನಾ ಪ್ರಪಂಚಾಂತರಾತ್ಮಸಾಗರದಿ ॥
ಲೀನವಹ ಸಂಗಮ ಸ್ಥಾನ ದೈವ ಪ್ರತಿಮೆ ।
ಧ್ಯಾನಸಂಧಾನವದು—ಮರುಳ ಮುನಿಯ ॥ ೧೮೩

ತನುವೊಳುಸಿರಾಡಿಯುಂ ಮನಸು ಸತ್ತವೊಲಿರಲಿ ।
ಮನಸು ಬಾಳ್ದುಂ ತನುವು ಸತ್ತವೊಲಿರಲಿ ॥
ತನುಮನಗಳೊಂದಾಗಿ ಬೇರೆ ಜಗವಿರದಾಗಿ ।
ಮಿನುಗುಗಾತ್ಮವದೊಂದೆ—ಮರುಳ ಮುನಿಯ ॥ ೧೮೪

ನಾನಾತ್ವದಿಂ ನಿನ್ನನೇಕತೆಗೆ ಮರಳಿಸಲು ।
ನ್ಯೂನತೆಗಳಿಂ ಪೂರ್ಣದೆಶೆಗೆ ಸಾಗಿಸಲು ॥
ಮಾನವತೆಯಿಂ ಬ್ರಹ್ಮತೆಗೆ ನಿನ್ನ ಸೇರಿಸಲು ।
ಮೌನ ಮನನವೆ ಮಾರ್ಗ—ಮರುಳ ಮುನಿಯ ॥ ೧೮೫

ನೀನೊರೆವ ತತ್ತ್ವಗಳ ನಿನ್ನುನ್ನತೋಕ್ತಿಗಳ ।
ನೀನಾನುಮನ್ಯೂನದಿಂ ಚರಿಸಲಾಯ್ತೇಂ ? ॥
ಊನವಲ್ಲಿರ್ದೊಡೇಂ ಕಾಲಾನುಕಾಲದ ।
ಧ್ಯಾನದಿಂ ಸಿದ್ಧಿಯೆಲೊ— ಮರುಳ ಮುನಿಯ ॥ ೧೮೬

ಸೌಂದರ್ಯ ಮಾಧುರ್ಯಗಳ್ ಬ್ರಾಹ್ಮಿಕಾನಂದ ।
ಸಿಂಧು ಶೀಕರ ಸುಕೃತ ಪವನನುಪಕಾರ ॥
ಬಂದಿಯುದರಿಂ ಭೋಗಿ ಯೋಗಿಗದು ತತ್ತ್ವಾನು- ।
ಸಂಧಾನ ಸಾಧನವೊ—ಮರುಳ ಮುನಿಯ ॥ ೧೮೭

## ಪರಮಾರ್ಥಸಾಧನೆ

ಗುರಿಯೇನು ಜೀವನಕೆ ಗುರಿಯರಿತು ಜೀವಿಪುದು ।
ಧರೆಯಿಂದ ಶಿಖರಕೇರುವುದು ಪುರುಷತನ ॥
ಕಿರಿದರಿಂ ಹಿರಿದಾಗುವುದು ದಿನದೊಳನಿತನಿತು ।
ಪರಮಾರ್ಥ ಸಾಧನೆಯೊ—ಮರುಳ ಮುನಿಯ ॥ ೧೮೮

ತುಪ್ಪದಿಂ ಬೆಂಕಿಯಾರಿಪನು ವಾಮಾಚಾರಿ ।
ಕಪ್ಪು ಮೈಸುಡೆ ಬಿಳ್ಪನುವನು ಹಟಯೋಗಿ ॥
ಉಪ್ಪುನೀರನು ಸಪ್ಪೆಗೈಯ್ವ ಭಟ್ಟಿಯುಪಾಯ- ।
ಕೊಪ್ಪದಾತರ ದುಡುಕು—ಮರುಳ ಮುನಿಯ ॥ ೧೮೯

ನೈಸರ್ಗ ಪೌರುಷಗಳುಭಯ ಸಮರಸಯುಕ್ತಿ ।
ಕೌಶಲದೆ ಜೀವಿತಂ ಸಾರ್ಥಕಂ ನೀಂ ಶು-॥
ಶ್ರೂಷಿಸುತ್ತಿನಿತು ನಿಗ್ರಹಿಸಿನಿತು ಪ್ರಕೃತಿಯಂ ।
ದಾಸಿಯನಾಗಿಸಿ ಗೆಲ್ಲೊ—ಮರುಳ ಮುನಿಯ ॥ ೧೯೦

ವಾಸನಾಕ್ಷಯಪದಕೆ ಯೋಗಗತಿ ಮೂರಂತೆ ।
ಆಶೆಗಳನತಿಭೋಗ ಮುಗಿಪುದೆನೆ ವಾಮ ॥
ಶೋಷಿಪ್ಪುದದನುಗ್ರತಪಗಳಿಂದೆನಲು ಹಟ ।
ಶಾಸನದ ನಯ ರಾಜ—ಮರುಳ ಮುನಿಯ ॥ ೧೯೧

ಏಕದಿನನೇಕಗಳನಾಗಿಪುದು ನೈಸರ್ಗ ।
ಏಕತೆಗನೇಕಗಳ ಮರಳಿಪನು ಪುರುಷಂ ॥
ಲೋಕ ಸಂಸ್ಕೃತಿಗೆ ನಾನಾತ್ವ ಮುಕ್ತಿಗಭೇದ ।
ಸಾಕಲ್ಯಮತಿಯೆ ಪಥ—ಮರುಳ ಮುನಿಯ ॥ ೧೯೨

ಚರಮಧ್ಯದೊಳ್ ಸ್ಥಿರವ ಜಗದಿ ಬ್ರಹ್ಮವ ನೆನೆವ ।
ನೆರಳೊಳರ್ಕಪ್ರಭೆಯ ಕಾಣುವಂ ಜಾಣಂ ॥
ಎರಡುಮನದೊಂದೆಂಬವೊಲ್ (ಸಮದ) ಬದುಕಿನಲಿ ।
ಚರಿಸುವಂ ಪರಮಾರ್ಥಿ—ಮರುಳ ಮುನಿಯ ॥ ೧೯೩

ಆವ ಬಚ್ಚಲ ನೀರದಾವ ಹೊಳೆಯನೊ ಸೇರಿ ।
ಆವ ನದಿಯೊಳೊ ಪರಿದು ಕಡಲ ಪಾಲಕ್ಕುಂ ॥
ಜೀವಿಗಳ ಗತಿಯಂತು ದಾರಿ ಗೊತ್ತಿರುವರಾರ್ ।
ಆವುದೆನಲದೆ ದಾರಿ—ಮರುಳ ಮುನಿಯ ॥ ೧೯೪

ನೀರು ನೆಲವೆರಡನು ಸೋಕದೆಯೆ ಬಾನಿನಲಿ ।
ಪಾರುವುದು ಪಕ್ಕಿ ನೋಡದರವೊಲು ಜಾಣಂ ॥
ಧಾರಿಣಿಯು ಗೊಂದಲ ದ್ವಂದ್ವಂಗಳಂ ಬಿಟ್ಟು ।
ಮೀರುವಂ ನಿರ್ಲಿಪ್ತ—ಮರುಳ ಮುನಿಯ ॥ ೧೯೫

ವೇದಾಂತಮುಂ ಲೋಕ ವಿಜ್ಞಾನಮುಂ ನಿನ್ನ ।
ಹಾದಿಗೆರಡಂಕೆ ನಡುಪಟ್ಟಿಯಲಿ ನಡೆ ನೀಂ ॥
ಅಧ್ಯಾತ್ಮವೊಂದು ಬದಿಯಧಿಭೌತವಿನ್ನೊಂದು ।
ಸಾಧಿಸೆರಡನುವೊಮ್ಮೆ—ಮರುಳ ಮುನಿಯ ॥ ೧೯೬

ಅಂದಂದು ನಿನ್ನಂತರಂಗ ಬಹಿರಾವರಣ ।
ಸಂದರ್ಭದಿನೆ ನಿನಗೆ ಧರ್ಮವಿಧಿ ಜಗದಿ ॥
ದ್ವಂದ್ವಗಳ ಮೀರಿ ನೀನದನರಿತು ನಡೆಯುತಿರೆ ।
ಮುಂದೆ ಸತ್ಯದ ಪೂರ್ಣ—ಮರುಳ ಮುನಿಯ ॥ ೧೯೭

## ಪರವಸ್ತು ಬುದ್ಧಿಗೆ ನಿಲುಕದು

ಸದ್ಯಸ್ಕಲೌಕಿಕಕೆ ಸರಿ ಭೌತವಿಜ್ಞಾನ ।
ಭೇದ್ಯವದರಿಂದೆಂತು ಪರತತ್ತ್ವಸೀಮೆ ? ॥
ಖಾದ್ಯರಸಗಳನರಿವ ನಾಲಗೆಗೆ ಗಾನರಸ ।
ವೇದ್ಯವಹುದೆಂತಯ್ಯ ?—ಮರುಳ ಮುನಿಯ ॥ ೧೯೮

ಕಾಚದೃಗ್ಯಂತ್ರದಿಂ ಗಣಿತ ಸಂಕೇತದಿಂ ।
ಲೋಚನಗ್ರಾಹ್ಯ ಪ್ರಪಂಚದುಪಮಿತಿಯಿಂ ॥
ವಾಚಾಮಗೋಚರವನರಸುವಂ ನಭಪಟವ ।
ಸೂಚಿಯಿಂ ಹೊಲಿವವನು—ಮರುಳ ಮುನಿಯ ॥ ೧೯೯

ರಾತ್ರಿ ದಿವಸ ಕ್ರಮಾವೃತ್ತಿಗಾರ್ ಕಾರಣನೊ ।
ಭೌತ ಪ್ರಪಂಚ ನಿಯಮಕದಾರೊ ಅವನೇ ॥
ವಾತಾವರಣ ವೈಪರೀತ್ಯಕಂ ಕಾರಣನು ।
ಕೇತು ರಾಹುವುಮವನೆ—ಮರುಳ ಮುನಿಯ ॥ ೨೦೦

ಜಗವ ಬಿಡಲೇಕೆ ? ಕಣ್ಣನು ತಿದ್ದಿಕೊಳೆ ಸಾಕು ।
ಮುಗಿಲ ಕಂಡಾಗಿನನ ಮರೆಯುದಿರೆ ಸಾಕು ॥
ಮಘವಂತನೆಸೆದ ಬಿಲ್ ಬಣ್ಣಗಳ ಹಿಂಬದಿಗೆ ।
ಗಗನವಿಹುದೆನೆ ಸಾಕು—ಮರುಳ ಮುನಿಯ ॥ ೨೦೧

ಮೂಲ ಚೇತನದಿಷ್ಟ ಲೀಲೆಯೀ ವಿಶ್ವಮಿರೆ ।
ಕಾಲದಾಲೋಚನೆಯ ಮುನ್ತಿಳಿಯಲಳವೇ ॥
ವೇಳೆ ದೆಸೆ ಗತಿ ನಿಯಮವಿರೆ ಲೀಲೆಯೆಲ್ಲಿಹುದು ।
ಕೋಲಾಹಲವಚಿಂತ್ಯ—ಮರುಳ ಮುನಿಯ ॥ ೨೦೨

ಥಳಥಳಿಕೆ ವಜ್ರಗುಣ, ವಜ್ರವೇ ಹೊಳಪಲ್ಲ ।
ಹೊಳಪಿರದ ವಜ್ರವನು ಗುರುತಿಸುವುದೆಂತು ? ॥
ಬೆಳೆಯುತಳಿಯುತ ಬಾಳ್ವ ಜಗವೆಲ್ಲ ಹೊಳಹೊಳಪು ।
ಅಲುಗದಾ ಮಣಿ ಬೊಮ್ಮ—ಮರುಳ ಮುನಿಯ ॥ ೨೦೩

ಸೃಷ್ಟಿ ಬೀಜವನಾದಿ ಸೃಷ್ಟಿಸತ್ತ್ವವನಂತ ।
ಚೇಷ್ಟೆ ಸೃಷ್ಟಿಗಳ ಪರ್ಯಾಯವದರ ಕಥೆ ॥
ಪುಷ್ಪವದರಿಂ ಕಂಪು ವಿಶ್ವ ಮಾಯಾವೃಕ್ಷ ।
ಶಿಷ್ಟಮಿಹುದು ಪರಾತ್ಮ—ಮರುಳ ಮುನಿಯ ॥ ೨೦೪

## ಶಾಶ್ವತರಹಸ್ಯವದು

ದೃಶ್ಯ ತನು ಘಟದೊಳಗದೃಶ್ಯ ಮಾನಸಶಕ್ತಿ ।
ಸ್ಪೃಶ್ಯ ಹೃನ್ನಾಡಿಯೊಳಗಸ್ಪೃಶ್ಯಸತ್ತ್ವ ॥
ವಿಶ್ವ ಜೀವಂಗಳೊಳಗಂತು ಗೂಢದ ಚಿತ್ತು ।
ಶಾಶ್ವತ ರಹಸ್ಯವದು—ಮರುಳ ಮುನಿಯ ॥ ೨೦೫

ಭೂಜದಂಗ ವಿಕಾಸ ಪಾರಂಪರಿಯ ನೋಡು ।
ಬೀಜದಿಂದಗೆ ಕಡ್ಡಿ ಚಿಗುರು ತರುವಾಯಿಂ ॥
ರಾಜಿಪುದು ನನೆ ಹೂವು ಮರಳಿ ಕಾಯೊಳು ಬೀಜ ।
ಸಾಜವೀಕ್ರಮ ವಿವೃತಿ—ಮರುಳ ಮುನಿಯ ॥ ೨೦೬

ಎರಡರೆಕ್ಷಣಮಾನುಮೊಂದೆ ದಶೆಯೊಳಗಿರದು ।
ತೊರೆಯ ನೀರಂತೆ ಪೊಸ ಪೊಸದಾಗುತೆ ಜಗಂ ॥
ಪರಿಯುತಿಹುದೆಡೆ ಬಿಡದೆ ಧಾರೆಯಿಂದೊಂದೆನಿಸಿ ।
ಸ್ಥಿರಚರವೊ ಸೃಷ್ಟಿನದಿ—ಮರುಳ ಮುನಿಯ ॥ ೨೦೭

ಮೃತಿಯೆನ್ನೆ ರೂಪಾಂತರಾಪ್ತಿಯೆನುವುದು ತತ್ತ್ವ ।
ಮತಿ ಕಂಡುಮದಕೆ ಮನಸೋಲದಿರೆ ನೈಜ ॥
ಹಿತ ಮನಕೆ ಪೂರ್ವಪರಿಚಿತ ವಸ್ತುವದು ಲಯಿಸ- ।
ಲಿತರರೂಪಿಂದೇನು ?—ಮರುಳ ಮುನಿಯ ॥ ೨೦೮

ಶ್ವಾಸಕೋಶದಲಿ ನೀಂ ತಂದುಸಿರು ಪೂರ್ವಕೃತ ।
ಬೀಸಿ ಬರ್ಪಾಕಾಶದೆಲರು ನವ ಸತ್ತ್ವ ॥
ಈಶಪದ ಸುರಭಿವಾತದೆ ನಿನ್ನ ಹಳೆಯ ದು- ।
ರ್ವಾಸನೆಗಳೋಡವೇಂ ?—ಮರುಳ ಮುನಿಯ ॥ ೨೦೯

ದೈವವನುವಹುದೆಂತು ಕರ್ಮವೊಳಿತಹುದೆಂತು ।
ಜೀವದಿ ವಿವೇಕ ವಿಜ್ಞಾನವಿಲ್ಲದಿರೆ ? ॥
ದೈವ ನೆರವಾದೀತು ಕರ್ಮಋಣ ಕರಗೀತು ।
ಜೀವಿಯೆಚ್ಚರದಿನಿರೆ—ಮರುಳ ಮುನಿಯ ॥ ೨೧೦

ಮನುಜ ಗಾತ್ರ ವ್ಯಕ್ತಿಯೊಳಮಿರ್ಪುದನುಪೂರ್ವಿ ।
ಕಣವೊಂದರಿಂ ಭ್ರೂಣ ಪಿಂಡಾಂಗ ವಿವೃತಿ ॥
ಜನಿಪುವದರಿಂ ಲೋಮ ನಖ ದಂತ ಶುಕ್ರಗಳು ।
ತನುವೃದ್ಧಿಯುಂ ಕ್ರಮದೆ—ಮರುಳ ಮುನಿಯ ॥ ೨೧೧

ಕಾಯ ಯಂತ್ರದ ರಚನೆ ರೀತಿಗಳ ಪರಿಕಿಸಲು ।
ಧೀಯುಕ್ತಿ ಸಂಧಾನವದುವೆ ವಿಜ್ಞಾನ ॥
ಮೇಯಗಳ ಮೀರ್ದ ಸತ್ತ್ವಕ್ಕಾತ್ಮ ಸಂಸ್ಕೃತಿಯೆ ।
ನೇಯುವದುವೆ ತಪಸ್ಸು—ಮರುಳ ಮುನಿಯ ॥ ೨೧೨

ಗಾಳಿ ಸಚ್ಚಿತ್ಪರಬ್ರಹ್ಮವುಸಿರುವ ಲೀಲೆ ।
ಮೂಲೋಕದೊಳಗೆ ಹೊರಗೆಲ್ಲೆಡೆಯುಮಲೆತ ॥
ಚಾಲಿಪ್ಪುದೆಲ್ಲವನು ಕೇಳ್ವರಾರಾರದನು ? ।
ಮೂಲದ ರಹಸ್ಯವದು—ಮರುಳ ಮುನಿಯ ॥ ೨೧೩

## ಪರಮಗತಿಯುದರಿಂದೆ

ನಿರಹಂತೆ ನಿಜಕರ್ಮ ನಿತ್ಯ ಸಂತೋಷಮಿವು ।
ವರಲಕ್ಷಣಂ ಸಹಜ ಸರ್ವ ಧರ್ಮಕ್ಕಂ ॥
ಚರಿಸು ನೀನದನು ಬಿಡದನುದಿನದ ಜೀವನದಿ ।
ಪರಮಗತಿಯುದರಿಂದೆ—ಮರುಳ ಮುನಿಯ ॥ ೨೧೪

ಅತ್ತಿತ್ತು ಸಗ್ಗಕ್ಕೆ ಹತ್ತುವಾಶೆಯನು ಬಿಡು ।
ತುಂತ್ರ್ತಿ ಸುರಹಾಸ್ಯಕ್ಕೆ ನಿರ್ವೀರ್ಯ ಭಕ್ತಿ ॥
ಉತ್ಥಾನದಿಂ ಬಾಳು ತತ್ತ್ವದಲಿ ಮನವಿರಿಸಿ ।
ಸತ್ತ್ವೋನ್ನತಿಯೆ ಸಗ್ಗ—ಮರುಳ ಮುನಿಯ ॥ ೨೧೫

ಮಗುವ ನೋಯಿಪ ರುಜೆಗೆ ತಾಯ ಕಂಬನಿ ಮದ್ದೆ ? ।
ದುಗುಡವಿಳಿವುದಜೀರ್ಣ ಪೊಡೆಯಿನಿಳಿದಂತೆ ॥
ಜಗವ ನೋಯಿಪ ರುಜೆಗೆ ನಿನ್ನ ಮರುಕದಿನೇನು ? ।
ಅಘಮಲವ ಕಳೆಯೆ ಹಿತ—ಮರುಳ ಮುನಿಯ ॥ ೨೧೬

ಮುನಿ ವಸಿಷ್ಠನ ಪತ್ನಿಯುಡುಪಥದೊಳಿರುವಂತೆ ।
ಮನದ ಗವಿಯಾಳದೊಳಗಾತುಮದ ಸೊಡರು ॥
ಮಿನುಗುತಿರ್ಪುದು ನೋಡು ದರ್ಶನೈಕಾಗ್ರ್ಯದಿಂ ।
ನೆನೆದದನು ಬಲವ ಪಡೆ—ಮರುಳ ಮುನಿಯ ॥ ೨೧೭

ಧರ್ಮಮುಮಧರ್ಮದವೊಲಿಹುದು ನರಸಾಜದಲಿ ।
ನಿರ್ಮಮದೆ ಧರ್ಮಂ ಮಮತ್ವದಿನಧರ್ಮಂ ॥
ಮರ್ಮಿ ವಿಶ್ವಪ್ರಕೃತಿ ಕೆಣಕುವಳಧರ್ಮವನು ।
ಧರ್ಮ ನಿನ್ನಯ ಪಾಡು—ಮರುಳ ಮುನಿಯ ॥ ೨೧೮

ಕಾಲ ಬೇರಾಯ್ತೆಂದು ಗೋಳಾಡುವುದದೇಕೆ ? ।
ಲೀಲೆ ಜಗವೆನ್ನಲದು ಪರಿ ಪರಿ ಪರೀಕ್ಷೆ ॥
ತಾಳೆಲ್ಲವನು ನಿನ್ನ ಸಂಯಮದೆ ಸತ್ತ್ವದಿಂ ।
ಬಾಳುವುದೆ ಗೆಲವೆಲ್ಲವೊ—ಮರುಳ ಮುನಿಯ ॥ ೨೧೯

## ದ್ವಂದ್ವಹಾನಿಯೆ ಮುಕ್ತಿ

ಸುಂದರ ಕುರೂಪಗಳ ಮೈತ್ರಿಮಾತ್ಸರ್ಯಗಳ ।
ಬಂಧು ಪರಕೀಯಗಳ ಲಾಭ ಲೋಭಗಳ ॥
ದಂದುಗಗಳುಬ್ಬೆಗದಿ ಬೆಮರಿಸದಿರಾತ್ಮವಂ ।
ದ್ವಂದ್ವಹಾನಿಯೆ ಮುಕ್ತಿ—ಮರುಳ ಮುನಿಯ ॥ ೨೨೦

ತನುವೆಚ್ಚರಿರಲು ಮನನಿದ್ರಿಸೆ ಸಮಾಧಿಯದು ।
ಮನವೆಚ್ಚರಿರಲು ತನು ನಿದ್ರಿಸಿರೆ ಯೋಗ ॥
ತನುಮನಸುಗಳು ಲೋಕಭಾರವೆನದಿರೆ ಶಾಂತಿ ।
ಅನಿರತಜ್ಞತೆ ಮುಕ್ತಿ—ಮರುಳ ಮುನಿಯ ॥ ೨೨೧

ವಿಜ್ಞಾನವೊಂದಿಹುದು ಪರತತ್ತ್ವ ದರ್ಶನಕೆ ।
ಚಿದ್ಗ್ರಥಿತಯಂತ್ರವದಕಿಹುದು ಶುಚಿಸದನು ॥
ದೃಗ್ದೃಶ್ಯ ದರ್ಶನತ್ರಯವೈಕ್ಯವಾದಂದು ।
ಹೃದ್ಗುಹೆಯೊಳಾನಂದ—ಮರುಳ ಮುನಿಯ ॥ ೨೨೨

ಜೀವದೊಡಗೂಡಿ ಬಂದಿರ್ಪ ವಾಸನೆಗಳಿಂ—।
ದಾವಿರ್ಭವಿಪ್ಪುದೀ ಸಂಸಾರ ವೃಕ್ಷ ॥
ಸಾವುದಾ ತರು ವಾಸನೆಯು ಬೇರ ಸುಟ್ಟಂದು ।
ಭಾವನಾಶವೆ ಮೋಕ್ಷ—ಮರುಳ ಮುನಿಯ ॥ ೨೨೩

ಹೃದಯವೊಂದಕ್ಷಿ ಜೀವಕೆ ಧಿಷಣೆಯೊಂದಕ್ಷಿ ।
ಉದಿಪುದೆರಡೊಂದೆ ಮೂರನೆ ಸಂವಿದಕ್ಷಿ ॥
ಅದರಿಂದತೀಂದ್ರಿಯಶಾಖಂಡ ಸತ್ಯಾನುಭವ- ।
ವದೆ ಶಾಶ್ವತಾನಂದ—ಮರುಳ ಮುನಿಯ ॥ ೨೨೪

ಕರ್ಮವೋ ದೈವಸಂಪ್ರೀತಿಯೋ ಸುಕೃತವೋ ।
ಧರ್ಮವುಪ್ಪುದು ಜೀವ ಬಂಧ ಶೈಥಿಲ್ಯಂ ॥
ನಿರ್ಮಮತೆಯಿಂದಲದು ಬಂಧಮೋಚಕಮಹುದು ।
ನಿರ್ಮಮತೆ ಮುಕ್ತಿಯಲಿ—ಮರುಳ ಮುನಿಯ ॥ ೨೨೫

ನರನುಮಂತಲೆಯವೋಲ್ ಪರಿಪರಿದು ಬಸವಳಿದು ।
ಬೆರೆತು ಜನಜೀವನದಿ ತನ್ನತನವಳಿಯೆ ॥
ಚರ ಜಗನ್ಮೂಲದ ಸ್ಥಿರತತ್ತ್ವವನು ಬಯಸಿ ।
ಕರೆಗುವುದೆ ಮುಕ್ತಿಪದ—ಮರುಳ ಮುನಿಯ ॥ ೨೨೬

ಅಲೆಯಿರದ ಕಡಲುಂಟೆ ಅಲೆಯದೇಂ ಜಲಚಲನ ।
ಚಲನೆಯೇಂ ಪ್ರಕೃತಿಕೃತಸಲಿಲಸ್ವಭಾವ ॥
ಅಲೆದಲೆದು ಕಡೆಗೆ ತಾಂ ಜಲಧಿಯಲಿ ವಿಲಯಿಪುದು ।
ಅಲೆಗೆ ಜಲಧಿಯೆ ಮುಕ್ತಿ—ಮರುಳ ಮುನಿಯ ॥ ೨೨೭

ಕೆರೆಗೆ ಸಾಧನೆ ಕಡಲು ಸಿದ್ಧಿ ನೀರಿನೊಳೈಕ್ಯ ।
ನರನ ಸಾಧನೆ ಲೋಕಸಿದ್ಧಿಯಾತ್ಮೈಕ್ಯ ॥
ಪರದಿಂದ ಬಂದವಂ ಪರಕೆ ಮರಳುವುದೆ ಗುರಿ ।
ಸ್ಮರಿಸುವುದು ನೀನಿದನು—ಮರುಳ ಮುನಿಯ ॥ ೨೨೮

## ಭ್ರಾಂತಿಯಳಿದೊಡೆ ಶಾಂತಿ

ಅಂತರಾತ್ಮದಿನಿಂದ್ರಿಯದ ಲೋಕ ಮಿಗಿಲೆಂಬ ।
ಸಂತೃಪ್ತಿಗಿಂತ ಸಂಪತ್ತು ಪಿರಿದೆಂಬ ॥
ಸ್ವಾಂತ ಶೋಧನೆಗಿಂತ ಭೋಗಾಪ್ತಿ ವರವೆಂಬ ।
ಭ್ರಾಂತಿಯಳಿದೊಡೆ ಶಾಂತಿ—ಮರುಳ ಮುನಿಯ ॥ ೨೨೯

ಭೋಗೇಚ್ಛೆಯಿಂ ಗೃಹಾರಾಮಧನಲೋಭಗಳು ।
ತ್ಯಾಗದಿಂ ಲೋಕಕಾರುಣ್ಯ ಪುಣ್ಯಗಳು ॥
ರಾಗದುದ್ವೇಗವಿರೆದುಭಯಪ್ರವೃತ್ತಿಗಳ ।
ಯೋಗದಿಂ ಶಾಂತಿಸುಖ—ಮರುಳ ಮುನಿಯ ॥ ೨೩೦

ಶಾಂತಿ ಜಗಕಿಲ್ಲದ ಅಶಾಂತಿಯದು ನಿನಗೇಕೆ ? ।
ಸಂತಾಪದಿಂದೆ ಸಂತಸವನೊಗೆಯಿಪೆಯಾ ? ॥
ಅಂತರಂಗದೊಳೊ ಬಾಹ್ಯದೊಳೊ ಶಾಂತಿಯ ಮೂಲ ।
ಸ್ವಾಂತಸುಸ್ಥಿತಿ ಶಾಂತಿ—ಮರುಳ ಮುನಿಯ ॥ ೨೩೧

ಉಡುರಾಜನುಬ್ಬಿಳಿತ ಬಿಟ್ಟು ದೃಢನಾದಂದು ।
ಕಡಲಲೆಗಳುರುಳಿಡದೆ ನಿದ್ದೆವೋದಂದು ॥
ಗುಡುಗು ಸಿಡಿಲುಗಳುಳಿದು ಬಾನ್ ಮಳೆಯ ಕರೆದಂದು ।
ಪೊಡವಿಗಪ್ಪುದು ಶಾಂತಿ—ಮರುಳ ಮುನಿಯ ॥ ೨೩೨

ತರಣಿಯುರಿಯದೆ ಜಗಕೆ ತಂಬೆಳಕನೆರೆವಂದು ।
ಕೊರೆ ಬಿರುಸುಗಳ ತೊರೆದು ಗಾಳಿ ಸುಳಿವಂದು ॥
ಪುರುಷ ಹೃದಯಂ ಸತ್ತ್ವಪರಿಪೂರ್ಣವಿರುವಂದು ।
ಧರಣಿಗಪ್ಪುದು ಶಾಂತಿ—ಮರುಳ ಮುನಿಯ ॥ ೨೩೩

ಅಂತರ್ಧನಂ ಬಾಹ್ಯಧನಕಿಂತ ಮಿಗಿಲೆಂದು ।
ಸ್ವಾಂತಶಿಕ್ಷಣೆ ರಾಜ್ಯವಿಧಿಗೆ ಮೇಲೆಂದು ॥
ಅಂತಶ್ಶಮಂ ಪ್ರಕೃತಿ ವಿಷಮಗಳ ಹಾಯ್ದೆಂದು ।
ಶಾಂತಿ ನರಮಂಡಲಕೆ—ಮರುಳ ಮುನಿಯ ॥ ೨೩೪

ಸಾಮಾಜಿಕಾಧಿಕೃತಿ ಸಂಪತ್ತುಗಳ ಬಾಹ್ಯ ।
ಸಾಮ್ಯವಿಧಿ ಶೃಂಖಲೆಯು ಜನಕೆ ತೊಡಿಸಿದೊಡೇಂ ? ॥
ಧೀಮನಗಳಂತರ್ಧನದೊಳಿವರ್ ಸಮರಾಗೆ ।
ಭೂಮಿತಾಯಿಗೆ ಶಾಂತಿ—ಮರುಳ ಮುನಿಯ ॥ ೨೩೫

ನೈಸರ್ಗಿಕದಿನಂತರಂಗವಸಮದೊಳಿರಲು ।
ವೈಷಮ್ಯವೆಂತಿರದು ನರಬಹಿರ್ನಯದೊಳ್ ? ॥
ಆಶೆಯಾವೇಗವನವರ್ ಸಮದಿ ತಡೆದಂದು ।
ಭೂಶಾಂತಿಗೆಡೆಯಹುದೊ—ಮರುಳ ಮುನಿಯ ॥ ೨೩೬

ಪೂರುಷಂ ಸೃಷ್ಟಿಶಿಶು ಮಾತೆಯೊಳ್ ಕೃತ್ರಿಮದ ।
ಬೇರಿರಲ್ ಸಂತಾನ ಋಜುವಪ್ಪುದೆಂತು ? ॥
ನಾರುತೊಗಟಿರದೆ ಮರವೆಲ್ಲ ಹೂವಾದಂದು ।
ಧಾರುಣಿಗೆ ಶಾಂತಿಯೆಲೊ—ಮರುಳ ಮುನಿಯ ॥ ೨೩೭

## ಸೇವೆಯರ್ಪಿಸಿ ಧನ್ಯನಾಗು

ವರ್ಗಸೋಪಾನ ನೈಸರ್ಗಿಕ ಸಮಾಜದಲಿ ।
ದುರ್ಗತಿಯುದೇನಲ್ಲ ತಗ್ಗಿರಲಹಂತೆ ॥
ಭರ್ಗನಿತ್ತೆಡೆಯಿಂದಲಾದನಿತು ಸೇವೆಯ ಸ- ।
ಮರ್ಪಿಸುತ ಧನ್ಯ ನೀಂ—ಮರುಳ ಮುನಿಯ ॥ ೨೩೮

ಹೊರಗೆ ಘನಲೋಕ ನಿನ್ನೊಳಗೆ ಸುಯ್ವು ರಹಸ್ಯ ।
ಎರಡಕಂ ನಡುವೆ ಸುಳಿಸುಳಿವ ಮುಗಿಲ ಪೊರೆ ॥
ಅರಿತು ನೀಂ ಮೂರನದಕದಕೆ ಸಲುವುದ ಸಲಿಸೆ ।
ಇರುವೆಡೆಯೆ ಪರ ನಿನಗೆ—ಮರುಳ ಮುನಿಯ ॥ ೨೩೯

ಅಹಮನಹಮಂಗಳ್ ಜೀವರಥಕೆರಡು ಕೀಲುಗಳು ।
ಬಹುವೇಗಮಹಮಿಂದೆ ವೇಗಮಿತಿಗನಹಂ ॥
ವಿಹಿತಮಿದ್ದೊಡಹಂತೆ ನಿರಹಂತೆಯಾಜ್ಞೆಯಲಿ ।
ಸಹಿತ ರಥಸಂಚಾರ—ಮರುಳ ಮುನಿಯ ॥ ೨೪೦

ಕರ್ಮವಶದಿಂ ಸ್ಥಾನ ನಿಯತ ಲೋಕದಿ ನಿನಗೆ ।
ಧರ್ಮನಿಶ್ಚಯವಪ್ಪುದಾ ಸ್ಥಾನದಂತೆ ॥
ಭರ್ಮ ಸಂದಾಯ ನಿನಗಾಧರ್ಮಸಾಧನಕೆ ।
ಮರ್ಮವಿದು ಧನ ನಯದಿ—ಮರುಳ ಮುನಿಯ ॥ ೨೪೧

ಅರ್ಚನೆ ಜಪ ಧ್ಯಾನ ಯಾತ್ರೆ ಮನದ ಸ್ಥಿತಿಗೆ ।
ಚರ್ಚೆ ತರ್ಕ ವಿಚಾರ ಮತಿಯ ವಿಶದತೆಗೆ ॥
ಪೆರ್ಚಿದ ತಪೋಯೋಗಯಜ್ಞಾದಿಯಾತುಮದ ।
ವರ್ಚಸ್ಸಿಗಪ್ಪುದೆಲೊ—ಮರುಳ ಮುನಿಯ ॥ ೨೪೨

ದೇವನಲಿ ಭಕ್ತಿ ದೈಹಿಕ ಭೋಗದಿ ವಿರಕ್ತಿ ।
ಜೀವಲೋಕದಿ ಮೈತ್ರಿಯೀ ತ್ರಿದಳಬಿಲ್ವಂ ॥
ಭಾವುಕನೊಳಧ್ಯಾತ್ಮದಲ್ಲಿ ಪಲ್ಲವಿಸಿರಲು ।
ಪಾವನವೊ ಜನ್ಮಕ್ಕೆ—ಮರುಳ ಮುನಿಯ ॥ ೨೪೩

## ಭಕ್ತಿಗೊಂದು ಅವಲಂಬನ

ಆಕಾರವೆನೆ ರೂಪನಿಯತಿಯದು ಗಾತ್ರಮಿತಿ ।
ರೇಖೆಯೊಳು ಮಿತಬಡಿಸುವೆಯ ಅಪರಿಮಿತವ ? ॥
ಬೇಕು ಮಿತಮಿತಿಯ ಹಿಡಿತಕೆ ಹಿರಿಯ ಗುರುತೊಂದು ।
ಸಾಕಾರಮಂತುಚಿತ—ಮರುಳ ಮುನಿಯ ॥ ೨೪೪

ಮೆಚ್ಚಿದರು ಮೂರ್ಖಂದಿ ಪೆಚ್ಚೆಂದರಾರ್ಖಂದಿ ।
ಸ್ವಚ್ಛಮತಿಗಿದು ಹುಚ್ಚು ಹುಚ್ಚು ಕೃತಿ ತಾನೇ ? ॥
ನೆಚ್ಚಿ ಬಾಳ್ವಜ್ಞಂಗೆ ಕಗ್ಗ ಮರುಕಗ್ಗ ರುಚಿ ।
ಅಚ್ಯುತ ಹಸಾದ ರುಚಿ—ಮರುಳ ಮುನಿಯ ॥ ೨೪೫

ಕಣ್ಣ ತುಂಬಲು ಕೇಶವಾಕಾರವಿರದೆ ಜ- ।
ಕ್ಕಣ್ಣನಾ ಬೇಲೂರ ದೇಗುಲದೊಳೆಂತಾ- ॥
ಚೆನ್ನೆಯರ ಮನ್ನೆಯರೆ ರಸಿಕ ಪ್ರಸನ್ನೆಯರೆ ।
ಸನ್ನೆಗಳ ತರಲಾಯ್ತು ?—ಮರುಳ ಮುನಿಯ ॥ ೨೪೬

ರಾಘವಾಕೃತಿಯ ತಾಂ ಕಣ್ಣಾರೆ ಕಾಣದಿರೆ ।
ತ್ಯಾಗರಾಜನ ಮುಖದೆ ಲಲಿತ ಭಾವಗಳು ॥
ರಾಗರಾಗಗಳಾಗಿ ಪರಿದು ಬರುತಿರ್ದಪುವೆ ? ।
ವಾಗ್ಗೇಯವದು ಸತ್ಯವದು—ಮರುಳ ಮುನಿಯ ॥ ೨೪೭

ಕಡಲ ಪನಿಯೊಂದು ಕಡಲನು ತಣಿಪ ಮರ್ಯಾದೆ ।
ಗಿಡದ ಹೂವೊಂದು ಗಿಡನರ್ಚಿಸುವ ರೀತಿ ॥
ಪೊಡವಿಯನು ಮಣ್ಣ ಹಿಡಿಯೊಂದು ಪೂಜಿಪ ಸೊಗಸು ।
ಬಡಜೀವ ದೇವನನು—ಮರುಳ ಮುನಿಯ ॥ ೨೪೮

## ಈಶಕೃಪೆ ಬೀಸೀತು

ಬೇಸಗೆಯೊಳೆಂದೊ ಸಂಜೆಯೊಳಾವಗವೊ ಮೆಲನೆ ।
ಬೀಸಿ ತಂಗಾಳಿ ತಾನಾಗಿ ಬರುವಂತೆ ॥
ಈಶಕೃಪೆ ಬೀಸೀತು ಮನದಳಲ ನೀಗೀತು ।
ಸೈಸು ನೀನದುವರಂ—ಮರುಳ ಮುನಿಯ ॥ ೨೪೯

ಉದ್ಯಾನದುಜ್ಜುಗಿಯು ದುಡಿತಕ್ಕೆ ಫಲವೇನು ? ।
ನಿತ್ಯ ಕಿಸಲಯ ಕುಸುಮ ನವಸೃಷ್ಟಿ ವೀಕ್ಷೆ ॥
ಉದ್ಯತನ್ ಬ್ರಹ್ಮನಂತನವರತ ಸೃಷ್ಟಿಯಲಿ ।
ಸದ್ಯಸ್ಕತಾತೋಷಿ—ಮರುಳ ಮುನಿಯ ॥ ೨೫೦

ಜೀವನದ ಕಷ್ಟದಲಿ ದೈವವನೆ ನಂಬಿ ನೀಂ ।
ದೈವ ಮಾಡಿಪುದೆಲ್ಲವನು ತಡೆವುದೆಲ್ಲ ॥
ದೈವದಧಿಕಾರದಿಂ ಪೆರತೊಂದುಮಿರದಲ್ಲಿ ।
ದೈವವೇ ಪರಮಗತಿ—ಮರುಳ ಮುನಿಯ ॥ ೨೫೧

ಉದ್ಯಮದಿ ಸಂಯಮಂ ಪೌರುಷನಯದ್ವಯಂ ।
ಸದ್ಯೋಚಿತಪ್ರಕಾರವನರಿತ ಸಾಸಂ ॥
ಆದ್ಯಕರ್ತನನುಗ್ರಹಿಸಲಹುದು ಪುರುಷಂಗೆ ।
ಸದ್ವಿಜಯಮೈ ದಿಟದಿ—ಮರುಳ ಮುನಿಯ ॥ ೨೫೨

ಜೀವ ಜೀವಂ ಬೇರೆ ಜೀವಚರಿತಂ ಬೇರೆ ।
ಜೀವಿಸೈ ನಿನ್ನಂತೆ ನೀನು ನೈಜದಲಿ ॥
ಪಾವನಂಬರೆಸು ಜೀವವ ದಿವಸದಿಂ ದಿನಕೆ ।
ದೈವಕ್ಕೆ ತಲೆಬಾಗು—ಮರುಳ ಮುನಿಯ ॥ ೨೫೩

ಕಂಗಳಿಗೆ ಮೆಯ್ತೋರಿ ಕರೆಗೆ ಮಾರುಲಿಯುಲಿದು ।
ಸಂಕಟದಿ ಬಂದು ಬಳಿಯಿರುವೆ ನಾನೆಂದು ॥
ಸಂಗಡಿಗನಾಗಲೊಲ್ಲದ ದೈವವಾರ್ಗೇನು ? ।
ತಿಂಗಳಿಲ್ಲದೆ ಶಶಿಯೆ ?—ಮರುಳ ಮುನಿಯ ॥ ೨೫೪

ಮನಂಜನಾಗದ ಮಾನುಷಸ್ನೇಹಕಿರದ ನಿ- ।
ರ್ಗುಣಿ ದೈವವಾಗಿರಲು ಭಕ್ತಿ ಬರಿದಲ್ತೆ ? ॥
ದನಿಗೆ ಮಾರ್ದನಿಗುಡದ ಕೈಗೆ ಕೈಪಿಡಿ ಕುಡದ ।
ಅನುದಾರಿ ದೈವವೇಂ ?—ಮರುಳ ಮುನಿಯ ॥ ೨೫೫

ಪಾತಿಗಳನಗೆದು ಗೊಬ್ಬರವಿಕ್ಕಿ ನೀರೆರೆದು ।
ಪ್ರೀತಿಯಿಂ ತರುಲತೆಯ ಕಳೆತೆಗೆದು ನಿಚ್ಚಂ ॥
ನೂತನದ ಪುಷ್ಪಪಲ್ಲವಲಕ್ಷ್ಮಿಯಿಂ ನಲಿವ ।
ತೋಟಗಾರನೊ ಬೊಮ್ಮ—ಮರುಳ ಮುನಿಯ ॥ ೨೫೬

## ಸಿದ್ಧಿಯಲ್ಲಂಟು

ಎಂತಿರಲಿ ನಿನ್ನೆಲ್ಲ ಜಗದ ವರ್ತನೆಗಳಲಿ ।
ಅತಿರೇಕದಿಂದೊಳಿತೆ ವಿಷಮವಾದೀತು ॥
ಸತತ ನರಯತ್ನ ಮಿಂತಿಮಿರ್ದೊಡಂ ವ್ಯಾಪ್ತಿ ನಿ-।
ಶ್ಚಿತವಯ್ಕ ಜಯಂಸಿದ್ಧಿ—ಮರುಳ ಮುನಿಯ ॥ ೨೫೭

ಉರದೊಳದ ನೀನರಸು ಶಿರವ ದೀವಿಗೆ ಮಾಡು ।
ಕರ ಚರಣ ಮೊದಲಾದುವೊರೆವುದನು ಕೇಳು ॥
ಅರಿವುಗಣ್ ನಿನ್ನೊಳಗೆ ಪೊರೆಯು ಮುಸುಕಿಹುದದನು ।
ಪರಿಶುದ್ಧಗೊಳಿಸದನು—ಮರುಳ ಮುನಿಯ ॥ ೨೫೮

ಶುದ್ಧಮೊದಲಿದ್ದು ಕೆಸರಿನ ಮಡುವಿನಲಿ ಬಿದ್ದು ।
ಒದ್ದೆಯಲಿ ಸಂಸಾರವೆಂದು ತಾರಾಡಿ ॥
ಒದ್ದಾಡಿ ಮೈಕೊಡಹಿ ಮತ್ತೆ ಪೂರ್ವದಲಿದ್ದ ।
ಶುದ್ಧತೆಯುಂಡರ್ಪುದದು—ಮರುಳ ಮುನಿಯ ॥ ೨೫೯

ನೆಲನ ಬಿಡದಡಿ ರೆಕ್ಕೆ ತೊಡದ ಮೈಯಾದೊಡಂ ।
ಕೆಳಕೆ ಮೇಲಕೆ ನರನು ಮೊಗವ ತಿರುಗಿಸನೇಂ ? ॥
ತಲೆಯು ತಾನೆತ್ತಿ ಗಗನಕೆ ಕಣ್ಣ ಸಾರ್ಚಿದಾ ।
ಗಳಿಗೆಯೇ ವಿಷ್ಣು ಪದ—ಮರುಳ ಮುನಿಯ ॥ ೨೬೦

ಕೂಡುವುದು ಚೆದರುವುದು ಮತ್ತೊಟ್ಟು ಕೂಡುವುದು ।
ಓಡಾಡಿ ಗುಡುಗಿ ಮಿಂಚೆಸೆದು ಕರಗುವುದು ॥
ಕಾಡಿ ಭೂಮಿಯನುಬ್ಬೆಗಂಬಡಿಸಿ ಕಡೆಗೆಂದೊ ।
ಮೋಡ ಮಳೆಗರೆಯುವುದು—ಮರುಳ ಮುನಿಯ ॥ ೨೬೧

ಇಂದ್ರಿಯಂ ಸಮಸ್ತದಖಿಲಾನುಭವಗಳ ನೀನು ।
ಕೇಂದ್ರೀಕೃತಂಗೆಯ್ದು ಮನನದಿಂ ಮಥಿಸಿ ॥
ತಂದ್ರಿಯಿರದಾತ್ಮ ಚಿಚ್ಛಕ್ತಿಯಿಂದುಜ್ಜುಗಿಸೆ ।
ಸಾಂದ್ರತತ್ತ್ವಪ್ರಾಪ್ತಿ—ಮರುಳ ಮುನಿಯ ॥ ೨೬೨

ಗುರಿಯೊಂದು ಬೇಕು ಜಗದಡವಿಯಲಿ ಪಥ ಕಾಣೆ ।
ತಿರುತಿರುಗಿ ಬಳಬಳಲಿ ಪಾಳಾಗದಿರೆ ಬಾಳ್ ॥
ಸ್ಥಿರಸತ್ಯವಿರಬೇಕು ಬಾಳ್ ಪ್ರದಕ್ಷಿಣವದಕೆ ।
ಅರಸು ನೀನದನುರದಿ—ಮರುಳ ಮುನಿಯ ॥ ೨೬೩

ಬಾಹ್ಯದಿಂದಂತರಕಮಂತರದೆ ಬಾಹ್ಯಕಂ ।
ಗ್ರಾಹ್ಯಮಾಗಿಹುದೊಂದಖಂಡೈಕ ರಸವು ॥
ಗುಹ್ಯವದು ನಿತ್ಯಾನುಸಂಧಾನದಿಂದಲವ— ।
ಗಾಹ್ಯವಾ ರಸತತ್ತ್ವ—ಮರುಳ ಮುನಿಯ ॥ ೨೬೪

ಗಿರಿಶಿಖರದಲಿ ತತ್ತ್ವ, ಧರೆಯ ಹಳ್ಳದಿ ನೀನು ।
ಗರುಡರೆಕ್ಕೆಯನು ನೀಂ ಪಡೆಯದಿರ್ದೊಡೆಯುಂ ॥
ಸ್ಫುರಿಸಲಿನಿತಾಗಾಗ ಶಿಖರ ನಿನ್ನಯ ಕಣ್ಗೆ ।
ಪುರುಳಹುದೊ ಕಾಲಿಗದು—ಮರುಳ ಮುನಿಯ ॥ ೨೬೫

## ಯಾರಿಗೆ ಜಯ ?

ಜಯವೆಲ್ಲಿ ಧರ್ಮಕಮಧರ್ಮಕಂ ಜಯವೆಲ್ಲಿ ? ।
ಜಯವೇನಜಯವೇನನಂತಕೇಳಿಯಲಿ ? ॥
ಜಯದ ಹಾದಿಗಳೆಲ್ಲ ಧರ್ಮದೀಪ್ತಗಳಲ್ಲ ।
ಸ್ವಯಮಲಿಪ್ತನಿಗೆ ಜಯಂ—ಮರುಳ ಮುನಿಯ ॥ ೨೬೬

ನ್ಯಾಯಕೇ ಜಯವಂತೆ ! ಧರ್ಮಜನೆ ಸಾಕ್ಷಿಯಲ ! ।
ದಾಯಿಗರ ಸದೆದು ದೊರೆತನವ ಗೆದ್ದನಲ ! ॥
ಆಯಸಂಬಟ್ಟುಂಡುದೇನೆನ್ನದಿರ್ ಪೈತ್ರ ।
ವಾಯಸಗಳುಂಡುವಲ !—ಮರುಳ ಮುನಿಯ ॥ ೨೬೭

ಜಯವಂತೆ ಧರ್ಮಕ್ಕೆ, ಧರ್ಮ ಜಯಿಸುವತನಕ ।
ವ್ಯಯವೆಷ್ಟು ? ಲೋಗರಾತ್ಮಕೆ ಗಾಯವೆಷ್ಟು ? ॥
ಭಯಪಡಿಸೆ ದಯೆಬಿಡಿಸಿ ನಯಗೆಡಿಸಿ ಬಂದ ಜಯ ।
ಜಯವೊ ? ಅಪಜಯಸಮವೊ ?—ಮರುಳ ಮುನಿಯ ॥ ೨೬೮

ಕಡೆಗೆ ಜಯಂ ಸತ್ಯಕ್ಕೆ, ಜಯವೇನೊ ದಿಟವಂತೆ ।
ತಡವೇಕೊ ! ಶೀಘ್ರದಿನ ಜಯ ಬಾರದೇಕೋ ! ॥
ಪೊಡವಿ ಸತಿಸುತರು ಮತ್ತೈತರೆ ಹರಿಶ್ಚಂದ್ರ ।
ನೀಡುಗಿದ್ದ ಮುದುಕನಲಿ—ಮರುಳ ಮುನಿಯ ॥ ೨೬೯

ಸತ್ಯಕೇ ಜಯುವಂತೆ! ಜಯುವೆ ಸತ್ಯಕ್ಕಿರಲು।
ಮುತ್ತುವುವದೇಕದನು ಕಲಹ ಕಷ್ಟಗಳು ? ॥
ಬತ್ತಿ ಸೊರಗದ ತುಟಿಗೆ ರುಚಿಸದೇ ಜಯುದ ಫಲ ?।
ಪಟ್ಟಿತಲೆಗೇಹೂವು ?—ಮರುಳ ಮುನಿಯ ॥ ೨೭೦

ಇರುವುದೆನಲೆಂದೆಂದುಮೆತ್ತೆತ್ತಲುಂ ನೆರೆದು।
ಕೊರೆವಡದೆ ಮಾರ್ಪಡದೆ ತಿರುಗದಲುಗದೆಯೆ ॥
ಭರಿಪುದು ಚರಾಚರೋಭಯುವನದು ಧರಿಸಿಹುದು।
ಸ್ಥಿರತೆಯುದು ಸತ್ಯವಲೊ—ಮರುಳ ಮುನಿಯ ॥ ೨೭೧

ಶುಭ ಅಶುಭಗಳಿಗಂಜಿ ಸುಖದುಃಖಗಳಿಗಂಜಿ।
ಅಭಯು ಭಯುಗಳಿಗಂಜಿ ಲೋಗರಿಂಗಂಜಿ ॥
ಉಭಯುಗಳ ವಿಾರ್ದ ಶಾಂತಿಯು ಸತ್ಯವೊಂದಿಹುದು।
ಲಭಿಸಲದು ಶಾಶ್ವತವೊ—ಮರುಳ ಮುನಿಯ ॥ ೨೭೨

ಹೃದಯಶಾಂಗಣದ ಗರ್ಭದೊಳಗಿಹುದು ತಿಳಿಚಿಲುಮೆ।
ವಿಧವಿಧದ ಲೋಕಾನುಭವದ ಹಾರೆಗಳು ॥
ಬೆದಕಿ ಬಾವಿಯುನಗೆಯು ಸತ್ಯಲೆಯ ಘಟಗಳಲಿ।
ಬದುಕಿಗೊದಗುವುದಮೃತ—ಮರುಳ ಮುನಿಯ ॥ ೨೭೩

## ಅದುಮಿಕೊ ಅಹಂತೆಯುನು

ಮೊದಲು ನಾನೆನಗೆ ಮೊದಲೂಟ ಮೊದಲಿನ ಪೀಠ।
ಮೊದಲು ನಾನೆನ್ನವರು ಬಳಿಕ ಉಳಿದವರು ॥
ಇದು ಲೋಕದೆಲ್ಲ ಕಲಹಗಳ ದುಃಖದ ಮೂಲ।
ಅದುಮಿಕೋ ಅಹಂತೆಯುನು—ಮರುಳ ಮುನಿಯ ॥ ೨೭೪

ನಾನು ನಾನೆಂದುರುಬಿ ನೋಡು ನಿನ್ನಿಕ್ಕೆಲದಿ ।
ನಾನು ನಾನುಗಳ ಮರು ಬೊಬ್ಬೆ ಕೆರಳಿಹುದು ॥
ನಾನು ನೀನುಗಳ ಬೊಬ್ಬೆಯು ಲೋಕದಲಿ ಹಬ್ಬ ।
ಕ್ಷೀಣವಾಗಲಿ ನಾನು—ಮರುಳ ಮುನಿಯ ॥ ೨೭೫

ಬೆನ್ನಲುಬನುಪಕೃತನೊಳುಡುಗಿಪುಪಕೃತಿಯೇನು ? ।
ಅನ್ಯಾಶ್ರಯುವ ಕಲಿತ ಲತೆ ನೆಟ್ಟಗಿಹುದೆ ? ॥
ತನ್ನಂದ ತಾನೆ ಅಬಲಂ ಬಲಿಯುಲನುವಾಗಿ ।
ನಿನ್ನ ನೀಂ ಮರೆಯಿಸಿಕೊ—ಮರುಳ ಮುನಿಯ ॥ ೨೭೬

ಲೋಕೋಪಕಾರ ಶಿವನೊರ್ವನೆತ್ತುವ ಭಾರ ।
ಏಕ ನಿನಗದನು ಹೊರುವಧಿಕಾರವವನು ॥
ಬೇಕಾದವೊಲು ಗೆಯ್ಗೆ, ನಿನ್ನ ಮಮತಾಕ್ಷಯಕೆ ।
ಲೋಕದಿಂದುಪಕಾರ—ಮರುಳ ಮುನಿಯ ॥ ೨೭೭

ತ್ಯಜಿಸಿ ನೀಂ ಭುಜಿಸುವುದು ಮನೆ ಸತ್ರವೆಂಬವೊಲು ।
ಯಜಮಾನನಲ್ಲ ನೀನತಿಥಿಯೆಂಬವೊಲು ॥
ಭುಜವ ಭಾರಕೆ ನೀಡ ರುಚಿಗೆ ರಸನೆಯ ನೀಡು ।
ಭುಂಜಿಸು ಮಮತೆಯ ಮರೆತು—ಮರುಳ ಮುನಿಯಂ ॥ ೨೭೮

ರಾಮಾನುಜರ್ ಮನೆಯ ಹೊರನಿಂತ ಶಿಷ್ಯನನು ।
ನಾಮವೇನೆನ್ನಲಾನಾನೆಂದನಾತಂ ॥
ಬಾ ಮಗುವೆ ನಾಂ ಸತ್ತಮೇಲೆ ನೀಂ ಬರ್ಪುದೆಂ- ।
ದಾ ಮುನಿಯಂ ಮಾತ ನೆನೆ—ಮರುಳ ಮುನಿಯಂ ॥ ೨೭೯

ಅಹಿತನಾರ್ ನಿನಗಿಹದಿ ಪರದೊಳಿಲ್ಲಾದೊಡಂ ।
ಇಹನವಂ ನಿನ್ನೊಳಿಲ್ಲಿಯೆ ಮನದ ಗವಿಯೊಳ್ ॥
ಅಹಮೆಂಬ ರಾಕ್ಷಸಂ ಬಹುರೂಪಿ ಬಹುಮಾಯಿ ।
ದಹಿಸು ನೀಂ ಮೊದಲವನ—ಮರುಳ ಮುನಿಯ ॥ ೨೮೦

ನಿರ್ಮಮತೆಯಭ್ಯಾಸಕೆಂದು ಲೋಕದೊಳಿಲ್ಲ ।
ಕರ್ಮಗಳ ಗೆಯ್ವನೆ ಮುಮುಕ್ಷು ಮಿಕ್ಕ ಜನ ॥
ಧರ್ಮ ಧರ್ಮವೆನುತ್ತೆ ಪೋಷಿಪರಹಂಮತಿಯ ।
ನಿರ್ಮಮತೆಯೇ ಮೋಕ್ಷ—ಮರುಳ ಮುನಿಯ ॥ ೨೮೧

ನಿನ್ನ ಪಾಪವ ತೊಳೆಯೆ ನಿನ್ನ ಸತ್ಕರ್ಮಗಳು ।
ಅನ್ಯರ್ಗ್ಗದುಪಕಾರವೆನ್ನುವುದಹಂತೆ ॥
ಪುಣ್ಯಂ ಕುಟುಂಬಪೋಷಣೆಯೆಂಬ ನೆವದಿನಿಳೆ- ।
ಗನ್ಯಾಯವಾಗಿಪುದೆ ?—ಮರುಳ ಮುನಿಯ ॥ ೨೮೨

ನಿನ್ನನಾರ್ ನಿಯಮಿಸಿದರೆನ್ನವಸ್ತ್ರದನೆಂದು ।
ಶೂನ್ಯವಪ್ಪುದೆ ಲೋಕ ನಿನ್ನ ಹಂಗಿರದೆ ? ॥
ಸ್ವರ್ಣಗರ್ಭನ ಪಟ್ಟವನು ಧರಿಸಿ ನೀಂ ಜಗಕೆ ।
ಕನ್ನವಿಡೆ ಬಂದಿಹೆಯೆ ?—ಮರುಳ ಮುನಿಯ ॥ ೨೮೩

## ಪುರುಷಹರುಷಂಗಳಿವು

ಹರಿಭಜನೆಯಶಾನಂದ ಕಿರಿಮಕ್ಕಳಾನಂದ ।
ಸರಸಗೀತಾನಂದ ಕರುಣೆಯಾನಂದ ॥
ಪರಕಾರ್ಯದಾನಂದ ನಿಃಸ್ವಾರ್ಥದಾನಂದ ॥
ಪುರುಷಹರುಷಂಗಳಿವು—ಮರುಳ ಮುನಿಯ ॥ ೨೮೪

ಅರುಣೋದಯದಾನಂದ ಗಿರಿಶೃಂಗದಾನಂದ ।
ತೊರೆಯ ತೆರೆಯದಾನಂದ ಹಸುರಿನಾನಂದ ॥
ಮಲರು ತಳಿರಾನಂದವಿವು ಸೃಷ್ಟಿಯಾನಂದ ।
ನಿರಹಂತೆಯಾನಂದ—ಮರುಳ ಮುನಿಯ ॥ ೨೮೫

ಮಲರ ಕಂಪಂದಿನೆಲರಿನಲೆಗಳ ಪಿಡಿದು ।
ಕಲೆತು ಕರಗುವುದಲ್ತೆ ಕಾಲ ಜಲಧಿಯಲಿ ॥
ಒಳಿತು ಕೆಡುಕುಗಳಂತು ನಿನ್ನ ಬಾಳರಲುಗಳು ।
ಉಳಿಯುವುವನಂತದಲಿ—ಮರುಳ ಮುನಿಯ ॥ ೨೮೬

## ಕಡಿಯೆಲ್ಲ ಪಾಶಗಳ

ಬಿಡಿಸು ಜೀವವನೆಲ್ಲ ಜಗದ ತೊಡಕುಗಳಿಂದ ।
ಬಿಡು ಮಮತೆಯನುಮೆಲ್ಲ ಪುಣ್ಯದಾಶೆಯನುಂ ॥
ದುಡಿದು ಲೋಕಕ್ಕದರ ಕಡಿತಕ್ಕೆ ಜಡನಾಗಿ ।
ಕಡಿಯೆಲ್ಲ ಪಾಶಗಳ—ಮರುಳ ಮುನಿಯ ॥ ೨೮೭

ಮಡುವಿಹುದು ನಿನಗಮಾ ಪರತತ್ತ್ವಕಂ ನಡುವೆ ।
ಗುಡಿಯನೋ ಸೊಡರನೋ ಮತಿಗೊದಗಿದುದನು ॥
ಪಿಡಿದು ನೀನಾಪಾರುಗಣೆಯೂರಿ ಹಾರಿದೊಡೆ ।
ದಡವ ಸೇರುವ ದೃಢದಿ—ಮರುಳ ಮುನಿಯ ॥ ೨೮೮

ತುರಿಕಜ್ಜಿ ನಿನಗೆಂದು ಜಗಕದನು ಸೋಕಿಪುದೆ ? ।
ಪೆರರ ಕಿವಿಗೇಕೆರೆವೆ ನಿನ್ನ ಕರೆಕರೆಯ ? ॥
ಕೊರೆಗು ಕಾರ್ಪಣ್ಯಗಳು ಮನಕಂಟುಜಾಡ್ಯಗಳು ।
ನೆರೆಗದನು ಹಂಚದಿರು—ಮರುಳ ಮುನಿಯ ॥ ೨೮೯

ಮಲವಿರದ ಮೈಯಿರದು ಕೊಳೆಯಿರದ ಮನವಿರದು ।
ಗಳಿಗೆ ಗಳಿಗೆಯು ಬೆವರೆ ಬಾಳಿಕೆಯು ಕುರುಹು ॥
ಕೊಳೆವುದಚ್ಚರಿಯಲ್ಲ, ಕೊಳೆಯದಿಹುದಚ್ಚರಿಯೊ ।
ಜಳಕವಾಗಿಸು ಬಾಳ್ಗೆ—ಮರುಳ ಮುನಿಯ ॥ ೨೯೦

ರಾಮಚಂದ್ರನ ಚರಿತೆ ಲೋಕಧರ್ಮಾದರ್ಶ ।
ಶ್ಯಾಮಸುಂದರ ಚರಿತೆ ವಿಷಯ ಸಮಯನಯ ॥
ಸೋಮೇಶ್ವರನ ರೂಪ ನಿರ್ದ್ವಂದ್ವ ಶಾಂತಿಮಯ ।
ಈ ಮೂವರನು ಭಜಿಸೊ—ಮರುಳ ಮುನಿಯ ॥ ೨೯೧

ಮುಗಿಲಿಗೇರೆನುತಿಹರು ತತ್ತ್ವೋಪದೇಶಕರು ।
ಬಿಗಿವುದಿಳೆಗೆಲ್ಲರನು ರೂಢಿಸಂಕೋಲೆ ॥
ಗಗನ ಧರೆಯಿಂತು ದಡವಾಗೆ ಪರಿವುದು ನಡುವೆ ।
ಜಗದ ಜೀವಿತದ ನದಿ—ಮರುಳ ಮುನಿಯ ॥ ೨೯೨

ಪ್ರೀತಿಸಲು ಬಿಡುವಿಲ್ಲ ನೀತಿಕಥೆ ಬೇಕಿಲ್ಲ ।
ಮಾತಂಗಡಿಯ ಕೊಳ್ಗು ಕೊಡುಬಿಡುಗಳಂತೆ ॥
ಯಾತ ನಿರ್ಯಾತಂಗಳೇ ದೊಡ್ಡ ಬದುಕಂತೆ ।
ಆತುರವೊ ಜನಕಿಂದು—ಮರುಳ ಮುನಿಯ ॥ ೨೯೩

## ನಿಯಮಪಾಲನೆಯಿಂದೆ ಜಯ

ಶ್ರಯಿಸು ನೀಂ ಸತ್ಯವನೆ ಭಾಗ್ಯವೆಂತಾದೊಡಂ ।
ಬಯಸು ಧರ್ಮವ ಲಾಭವೆಂತು ಪೋದೊಡೆಯುಂ ॥
ನಿಯಮಪಾಲನೆಯಿಂದ ಜಯ ಲೋಕಸಂಸ್ಥಿತಿಗೆ ।
ಜಯವದು ನಿಜಾತ್ಮಕ್ಕೆ — ಮರುಳ ಮುನಿಯ ॥ ೨೯೪

ಅಲುಗಾಡುವೆಲೆ ಮೇಲೆ ನೆಲೆ ನೆಲಸಿ ಬೇರ್ ಕೆಳಗೆ ।
ಚೆಲುವರ್ಧ ಬಲವರ್ಧ ಸೇರಿ ಮರವೊಂದು ॥
ತಿಳಿವುದೀ ಪ್ರಕೃತಿ ಸಂಯೋಜನೆಯ ಸೂತ್ರವನು ।
ಸುಳುವಹುದು ಬಾಳ ಹೊಳೆ—ಮರುಳ ಮುನಿಯ ॥ ೨೯೫

ಸಜ್ಜೀವನಕೆ ಸೂತ್ರವೆರಡು ಮೂರದು ಸರಳ ।
ಹೊಟ್ಟೆ ಪಾಡಿಗೆ ವೃತ್ತಿ ಸತ್ಯಬಿಡದಿಹುದು ॥
ಚಿತ್ತವೀಶನೊಳದುವೆ ಚಿಂತೆಗಳ ಬಿಟ್ಟಿಹುದು ।
ಮೈತ್ರಿ ಲೋಕಕ್ಕೆಲ್ಲ—ಮರುಳ ಮುನಿಯ ॥ ೨೯೬

ಏಕಾಕಿಯಿರ್ದು ಸಾಕಲ್ಯಕಾರ್ಜಿಸು ಬಲವ ।
ಸಾಕಲ್ಯವೃತ್ತಿಯಿಂದೇಕತೆಗೆ ಬಲವ ॥
ಕಾಕಾಕ್ಷಿಯುಗದೇಕಗೋಲದವೊಲಿರೆ ಜಯವು ।
ಲೋಕ ನಿರ್ಲೋಕಗಳ—ಮರುಳ ಮುನಿಯ ॥ ೨೯೭

ಸತ್ತವರ ಯಶವೊಂದು ಶವಭಾರ ಲೋಕಕ್ಕೆ ।
ಒತ್ತುತಿರಲದು ಮೇಲೆ ಯುವಕಗತಿಯೆಂತು ? ॥
ಉತ್ತು ನೆಲದಲಿ ಬೆರಸು ಹಳೆ ಜಸವನದು ಬೆಳೆದು ।
ಮತ್ತೆ ಹೊಸ ಪೈರಕ್ಕೆ—ಮರುಳ ಮುನಿಯ ॥ ೨೯೮

### ಇರು ತಾಳ್ಮೆಯಿಂ ನಿಂತು

ಮರಣವನು ಬೇಡದಿರು ಜೀವಿತವ ಬೇಡದಿರು ।
ತರುವುದೆಲ್ಲವ ಸಕಾಲಕೆ ಕರ್ಮಚಕ್ರಂ ॥
ಪರಿಚಾರನೊಡೆಯನಾಜ್ಞೆಯನಿದಿರು ನೋಳ್ಪವೋ- ।
ಲಿರು ತಾಳ್ಮೆಯಿಂ ನಿಂತು—ಮರುಳ ಮುನಿಯ ॥ ೨೯೯

ಬಾಳುವೆಯು ಬಯಸದಿರು ಸಾವನುಂ ಬಯಸದಿರು ।
ವೇಳೆ ವೇಳೆಯು ತೋರ್ಪ ಧರ್ಮವೆಸಗುತಿರು ॥
ಕಾಲನಾತುರಿಸದನು ಪಾಲುಮಾರದನವನು ।
ಆಳು ಕರ್ಮಋಣಕ್ಕೆ—ಮರುಳ ಮುನಿಯ ॥ ೩೦೦

ಸೃಷ್ಟಿ ಶಿಶುವಾದೊಡಂ ಪೂರುಷಂ ತನ್ನಾತ್ಮ ।
ಶಿಷ್ಟಿಯಿಂದವಳ ಮಾಯಾಪಟವ ಪರಿದು ॥
ನಿಷ್ಠುರ ಜಗದ್ದ್ವಂದ್ವಗಳ ದಾಟಿ ಬಾಳ್ವುದೆ ವಿ- ।
ಶಿಷ್ಟ ಧರ್ಮಮವಂಗೆ—ಮರುಳ ಮುನಿಯ ॥ ೩೦೧

ಒಳಿತೊಂದೆ ಶಾಶ್ವತವೊ ಉಳಿದೆಲ್ಲವಳಿಯುವುದೊ ।
ಅಳುವ ನೀನೊರಸಿದುದು ನಗುವ ನಗಿಸಿದುದು ।
ಒಲಿದು ನೀಂ ನೀಡಿದುದು ನಲವ ನೀನೆಸಗಿದುದು ।
ನೆಲಸುವುವು ಬೊಮ್ಮನಲಿ—ಮರುಳ ಮುನಿಯ ॥ ೩೦೨

ತನಯ ಮಡದಿಯರಿಂಗೆ ಪರಮಗತಿ ತಾನೆಂದು ।
ಧನಕನವ ದಾಯನಿಧಿ ದೈವ ಸಮವೆಂದು ॥
ಋಣಜಾಲವನು ಬೆಳಸಿ ವಿಪರೀತಗೆಯ್ವಂಗೆ ।
ಮನೆಯೆ ಸೆರೆಮನೆಯಹುದೊ—ಮರುಳ ಮುನಿಯ ॥ ೩೦೩

ಸುಡು ಕಾಮಮೂಲವನು ಸುಡಲಾಗದೊಡೆ ಬೇಗ ।
ಕೊಡು ಕಾಮಿತವನೆಂದು ಬೇಡು ದೈವವನು ॥
ಕಿಡುವುದೀ ಜೀವ ಕೊರಗಿ ಕಾಯುತ ಕರಟಿ ।
ನಡೆವುದಿಹ ತೋರ್ಕೆಯಿಂ—ಮರುಳ ಮುನಿಯ ॥ ೩೦೪

ಶಾರೀರವೆಂತೊ ಮಾನಸಬಲವುಮಂತು ಮಿತ ।
ಆರೆಯುವ್ದು ನೋಡದಕೆ ತಕ್ಕ ಪಥ್ಯಗಳ ॥
ವೀರೋಪವಾಸಗಳ ಪೂರ ಜಾಗರಣೆಗಳ ।
ಭಾರಕದು ಕುಸಿದೀತು—ಮರುಳ ಮುನಿಯ ॥ ೩೦೫

ಮಾನ್ಯವಲ್ತೆನಗೆ ವಧೆಯಿಂ ಬರ್ಪ ಜಯವೆಂದು ।
ಸಂನ್ಯಾಸದಾಭಾಸಿ ಪಾರ್ಥನಾದಂದು ॥
ಅನ್ಯಾಯ ಸಹನೆ ವೈರಾಗ್ಯವೆಂತಹುದೆಂದು- ।
ಪನ್ಯಸಿಸಿದಂ ಕೃಷ್ಣ—ಮರುಳ ಮುನಿಯ ॥ ೩೦೬

ತರುವಲ್ಕದಂತೆ ನರಮಮತೆ ಜೀವಕೆ ಕವಚ ।
ಬಿರುಸಾಗಲದು ತಾನೆ ಬಾಳ್ಗೆ ಸಂಕೋಲೆ ॥
ಪರುಷತೆಯ ಮೇಲೇಳ್ಗೆ ಪುರುಷತೆಯ ಕಲ್ಪಲತೆ ।
ಸರಸತೆಯೆ ಮಕರಂದ—ಮರುಳ ಮುನಿಯ ॥ ೩೦೭

## ಮಾನವ ಬ್ರಹ್ಮ

ಸೃಷ್ಟಿಚಿತ್ರದ ನಡುವೆ ನರನದೊಂದುಪಸೃಷ್ಟಿ ।
ಚೇಷ್ಟಿಪ್ಪುದವನ ಕೈ ಪ್ರಕೃತಿಕೃತಿಗಳಲಿ ॥
ಸೊಟ್ಟಗಿರೆ ನೆಟ್ಟಗಿಸಿ ನೆಟ್ಟಗಿರೆ ಸೊಟ್ಟಿಪುದು ।
ಪುಟ್ಟು ಬೊಮ್ಮನೊ ನರನು—ಮರುಳ ಮುನಿಯ ॥ ೩೦೮

ಅಪರಿಪಕ್ವದ ರಚನೆ ಜಗವಿದು ವಿಧಾತನದು ।
ನಿಪುಣ ನಾನಿದನು ಪಕ್ವಿಪೆನೆಂದು ಮನುಜಂ ॥
ಚಪಲದಿಂ ಪೆಣಗಾಡಿ ವಿಪರೀತವಾಗಿಪನು ।
ಉಪವಿಧಾತನೊ ನರನು—ಮರುಳ ಮುನಿಯ ॥ ೩೦೯

ಪುರುಷಮತಿಯೊಳ್ ಧರ್ಮಪ್ರಕೃತಿಯೊಳ್ ಧರ್ಮವೇಂ ? ।
ಸರಿಯೆ ಜೀವಿಗೆ ಜೀವನಂ ಜೀವಿಯುಹುದು ? ॥
ಹಿರಿದು ಧರ್ಮಂ ಪ್ರಕೃತಿತಂತ್ರದಿಂದದರಿಂದೆ ।
ಶಿರವೊ ಸೃಷ್ಟಿಗೆ ನರನು—ಮರುಳ ಮುನಿಯ ॥ ೩೧೦

ಭಾವದ ವಿಕಾರಂಗಳಳಿದ ಜೀವವೆ ದೈವ ।
ಭಾವವೇಂ ದೈವದೊಂದುಚ್ಛ್ವಸನ ಹಸನ ॥
ಜೀವಿತಂ ದ್ವಂದ್ವ ದೈವತ್ವದೊಳದ್ವಂದ್ವ ।
ಜೀವರೂಪಿಯೊ ದೈವ—ಮರುಳ ಮುನಿಯ ॥ ೩೧೧

ಜೀವಕೆ ನಮೋಯೆನ್ನು ದೈವ ತಾಂ ಜೀವವಲ ।
ಜೀವಿತವನಂತ ಚಿತ್ಸತ್ತ್ವ ಲೀಲೆಯುಲ ॥
ಜೀವಹೊರತೇಂ ದೈವ, ದೈವಹೊರತೇಂ ಜೀವ ।
ಜೀವಕ್ಕೆ ಜಯವೆನ್ನು—ಮರುಳ ಮುನಿಯ ॥ ೩೧೨

ಸೀಮೆ ಜಗಕೆಲ್ಲಿಹುದು ವ್ಯೋಮದೊಳಗೇನಿಲ್ಲ ।
ನೇಮಿಯಿರದಾಚಕ್ರದಲಿ ನಾಭಿ ನೀನು ॥
ನಾಮರೂಪಾಭಾಸ ನಭದ ಮೇಘವಿಲಾಸ ।
ಸ್ಥೇಮಿ ಚಿನ್ಮಯ ನೀನು—ಮರುಳ ಮುನಿಯ ॥ ೩೧೩

### ಅಧಿಪುರುಷಪದಕೇರು

ಶಿರವ ಬಾಗದೆ ನಿಂದು ನಿನ್ನ ವಿಧಿ ಬಡಿವಂದು ।
ಸರಸಿಯಹಾಗಿಯೆ ಜಗದ್ವಂದ್ವಗಳ ಹಾಯ್ದು ॥
ಪುರುಷಪದದಿಂದೆ ನೀನಧಿಪುರುಷ ಪದಕೇರು ।
ಗುರಿಯದುವೆ ಜಾಣಂಗೆ—ಮರುಳ ಮುನಿಯ ॥ ೩೧೪

ವಿಧಿಯನೆದುರಿಸಿ ಹೋರಿ ಪುರುಷತೆಯ ತುದಿಗೇರಿ ।
ಬದುಕಿನೆಲ್ಲನುಭವಗಳಿಂ ಪಕ್ವನಾಗಿ ॥
ಹೃದಯದಲಿ ಜಗದಾತ್ಮನಂ ಭಜಿಪ ನಿರ್ದ್ವಂದ್ವ-।
ನಧಿಪುರುಷನೆನಿಸುವನೊ—ಮರುಳ ಮುನಿಯ ॥ ೩೧೫

ಪೌರುಷ ಪ್ರಗತಿಮಾರ್ಗಗಳ ನೋಡೇಸುಜನ ।
ದೂರದಿಂ ಕಂಡು ಶುಭ ಮೇರುಶಿಖರವನು ॥
ಧೀರೆ ಸಾಹಸದಿಂದೆ ಪಾರಮಾರ್ಥಿಕದಿಂದೆ ।
ದಾರಿಪಂಜುವೊಲಿಹರು—ಮರುಳ ಮುನಿಯ ॥ ೩೧೬

ಗೈದ ಪಾಪದ ನೆನಪಿನಿರಿತವಾತ್ಮಕೆ ಮದ್ದು ।
ಆದೊಡಳುವೇಂ ಪಾಲೆ ಜೀವ ಪೋಷಣೆಗೆ ? ॥
ರೋದನೆಯನುಳಿದಾತ್ಮಶೋಧನೆಯನಾಗಿಪುದು ।
ಸಾಧು ನಿಷ್ಕೃತಿಮಾರ್ಗ—ಮರುಳ ಮುನಿಯ ॥ ೩೧೭

ಕಾರ್ಮುಗಿಲು ನಿನ್ನ ಕುರುಡಾಗಿಪ್ಪುದರಗಳಿಗೆ ।
ಕರ್ಮಪಟಲವುಮಂತು ಸುಳಿದು ಪಾರುವುದು ॥
ನಿರ್ಮಲಂ ಗಗನಮಪ್ಪುದು ತೊಂಕಡಿಸದಿರು ।
ಪೆರ್ಮೆಯಿದು ಪುರುಷತೆಗೆ—ಮರುಳ ಮುನಿಯ ॥ ೩೧೮

ತನ್ನ ತಾ ಗೆಲದೆ ಲೋಕದೊಳೆಲ್ಲ ಗೆಲುವವನು ।
ಮುನ್ನ ರಾವಣನಹನು ನರರು ನಗುತಿಹರು ॥
ತಿನ್ನುವನು ಜಗವ ತಾಂ ತನಗೆ ತುತ್ತಾಗುವನು ।
ಪುಣ್ಯವೇನಿದರಲ್ಲಿ ?—ಮರುಳು ಮುನಿಯ ॥ ೩೧೯

## ಇದು ದೈವಗತಿ

ಕೃತಕರ್ಮಫಲ ಶೇಷವಂ ಜೀವಿಗುಣಿಸುವುದು ।
ಇತರ ಜೀವಿಗತಿಗದನಿಮಿತ್ತವೆನಿಸುವುದು ॥
ಸತತ ಧರ್ಮದಿ ಜಗವನೆಲ್ಲ ತಾಂ ಪೊರೆಯುವುದು ।
ತ್ರಿತಯುವಿದು ದೈವಗತಿ—ಮರುಳ ಮುನಿಯ ॥ ೩೨೦

ಈ ದಿನದ ಸುಖಕೆ ನೀನಿಂದಿನಾ ಲಾಭಕ್ಕೆ ।
ಗೈದ ಕರ್ಮದ ಭೂತವಿಂದೆ ಮಲಗುವುದೇಂ ? ॥
ಕಾದು ಹೊಂಚಿಟ್ಟಿಂದೊ ನಿನ್ನನೆತ್ತಲೊ ಒಡಿದು ।
ವೇಧಿಸದೆ ತೆರಳದದು—ಮರುಳ ಮುನಿಯ ॥ ೩೨೧

ಹಿತಬೋಧಕರು ಸಾಲದುದರಿಂದಲಲ್ಲ ಈ-।
ಕ್ಷಿತಿಗೆ ದುರ್ದಶೆ ಬಂದುದವಿಧೇಯರಿಂದೆ ॥
ದ್ಯುತಿ ಕಣ್ಣೊಳಿರ್ದೊಡೇಂ ಶಿರದಿ ಮದ್ಯರಸಂಗ-।
ಳತಿಶಯಂ ಸೇರಿರಲು—ಮರುಳ ಮುನಿಯ ॥ ೩೨೨

ತ್ರಿಭುವನಗಳ್ಗೇಕೈನೀಶಂ ನಿರಂಕುಶಂ ।
ಸಭೆಯುಮಿಲ್ಲವನ ತಿದ್ದಿಸೆ ಜನದ ಕೂಗಿಂ ॥
ಅಭಯನಾಳುವ ರಾಜ್ಯವನುದಿನಮುಮಿಂತು ಸಂ-।
ಕ್ಷುಭಿತಮಿಹುದಚ್ಚರಿಯೆ—ಮರುಳ ಮುನಿಯ ॥ ೩೨೩

ಸ್ರಷ್ಟನಾವನೊ ಆತನಾರಾದೊಡೇಂ ನಿನಗೆ ।
ಶಿಷ್ಟನಾಗಿಪೆಯ ಏನವನ ನೀನು ? ॥
ಶಿಷ್ಟರನು ಮಾಡು ಒಡಹುಟ್ಟುಗಳ ಮೊದಲು ನೀನ್ ।
ಸೃಷ್ಟಿಯಂಶವೆ ಕಾಣೊ—ಮರುಳ ಮುನಿಯ ॥ ೩೨೪

ಸಾಧಿಪ್ಪವೇನ ನಾಂ ನಮಗಿರ್ಪ ಶಕ್ತಿಯೇಂ ।
ಸಾಜವಂ ಮುರಿವವೇಂ ಕಿಂಕರರು ನಾವು ॥
ಬೋಧಮುಂ ಪ್ರಕೃತಿಮಿತಮಾಶೆಯುಂ ಮಿತ ನಮಗೆ ।
ಪಾದ ಬಿಡುವಕ್ಷಿ ಬಿಗಿ—ಮರುಳ ಮುನಿಯ ॥ ೩೨೫

ನಾನು ನಾನಾನೆನ್ನುತಿರುವೊಂದುಸಿರೆ ನಿನ್ನ ।
ಮಾನಸದ ಚೀಲದಲಿ ತುಂಬಿ ಬೀಗುತಿರೆ ॥
ತಾಣವದರೊಳಗೆಲ್ಲಿ ಬೇರೊಂದುಸಿರು ಹೊಗಲು ।
ಕಾಣದದು ತತ್ತ್ವವನು—ಮರುಳ ಮುನಿಯ ॥ ೩೨೬

## ಮಾನವಶಕ್ತಿ ಪರಿಮಿತ

ಸತ್ಯ ಸೂರ್ಯನವೊಲಪಾರವಸುದಳ ನಿನಗೆ ।
ನಿತ್ಯ ಲಭ್ಯವು ನಿನಗೆ ಖಂಡ ಮಾತ್ರವದು ॥
ಶ್ರುತಿ ಯುಕ್ತಿ ಕಣ್ಣಳವು ಸಮ್ಮತಿಯೊಳವು ಸೇರೆ ।
ಮಿತ ದೃಶ್ಯ ನಿನಗೆಲವೊ—ಮರುಳ ಮುನಿಯ ॥ ೩೨೭

ಸ್ವಸ್ವರೂಪವನರಿತುಕೊಳುವ ಮುನ್ನಮೆ ನರಂ ।
ವಿಶ್ವಪ್ರಕೃತಿ ಕಾರ್ಯಶಾಲೆಯೊಳಗುಟ್ಟನ್ ॥
ವಶ್ಯವಾಗಿಸಿಕೊಳ್ಳಲುಜ್ಜುಗಿಸಿ ತನಗೆ ತಾ- ।
ನಸ್ವಸ್ಥನಾಗಿಹನೊ—ಮರುಳ ಮುನಿಯ ॥ ೩೨೮

ಸುರಪ ಚಾಪದ ಗಾತ್ರ, ವಿಸ್ತಾರ ಭಾರಗಳ ।
ಧರೆಯಿಂದಲಳೆಯುವೆಯ ಕೈ ಮೊಳಗಳಿಂದೆ ? ॥
ಪರಮಾನುಭವದೊಳದ್ವೈತವೋ ದ್ವೈತವೋ ।
ಅರಿಯುವನೆ ಬರಿ ತರ್ಕ ?—ಮರುಳ ಮುನಿಯ ॥ ೩೨೯

ಧರಣಿ ತರಣಿಗಳ ಗತಿ ಕ್ಲೃಪ್ತವೆನುವವೊಲಿಹುದು ।
ಚರಿಸುತಿರಲವರ ಬಲ ವೆಯುವಾಗದಿಹುದೇಂ ? ॥
ಕರೆಗುವುದವರ್ಗ್ಗಳೊಡಲವರಡಿಗಳದುರುವುವು ।
ಕೊಲೆಯಹಾರಿಗದರಿಂದೆ ?—ಮರುಳ ಮುನಿಯ ॥ ೩೩೦

ಸೃಜಿಸಿ ಯಂತ್ರಾಯುಧಗಳಂ ಪ್ರಗತಿಸಾಧನೆಗೆ ।
ನಿಜಲಕ್ಷಣೋನ್ನತಿಯನೇ ಮರೆತು ಮನುಜಂ ॥
ರುಜಿತಾತ್ಮನಪ್ಪನಾ ಯಂತ್ರಾಪಘಾತದಿನೆ ।
ವಿಜಯ ವಿಭ್ರಾಂತಿಯದು—ಮರುಳ ಮುನಿಯ ॥ ೩೩೧

ನಾನು ನೀನಾದಂದು ನೀನೆಲ್ಲರಾದಂದು ।
ಲೀನನೆಲ್ಲರೊಳಾಗಿ ನಾನು ಸತ್ತಂದು ॥
ಏನೊಂದುಮೆನ್ನ ಹೊರಗೆನ್ನ ಕಣ್ಗಿರದಂದು ।
ಜ್ಞಾನ ಪರಿಪೂರ್ಣವೆಲೊ—ಮರುಳ ಮುನಿಯ ॥ ೩೩೨

ಹ್ರಸ್ವದಲಿ ದೀರ್ಘದಲಿ ಕುಟಿಲದಲಿ ಸರಳದಲಿ ।
ವಿಶ್ವಕಾಯಂ ಕಂಗಳಂಗವಿಭ್ರಮೆಯಿಂ- ॥
ದೀಶ್ವರಂ ನಟಿಸುತಿರೆ ರಭಸವಳಿವವರಾರು ? ।
ಶಾಶ್ವತಂ ಮಿತಿಗಳವೆ ?—ಮರುಳ ಮುನಿಯ ॥ ೩೩೩

## ಪ್ರಕೃತಿ ವಿಲಾಸ

ನಿರಪೇಕ್ಷೆ ನಿರುಪೇಕ್ಷೆ ಸೃಷ್ಟಿ ಕರ್ಮದ ರೀತಿ ।
ಬೆರಲದಿರದಾ ಕಣ್ಣುದಾಸೀನಮಿರದು ॥
ಕಿರಿದವಳಿಗೊಂದಿರದು ಪರಿಪೂರ್ಣವೊಂದಿರದು ।
ಪರಿವರ್ತ್ಯಮೆಲ್ಲಮುಂ—ಮರುಳ ಮುನಿಯ ॥ ೩೩೪

ಚಿಂತಿಸಲ್ಕಾಗದದ್ಭುತಶಕ್ತಿ ಸೃಷ್ಟಿಯದು ।
ಜಂತು ಜಂತುವಿಗವೊಂದೊಂದು ಬೇರೆ ನಯು ॥
ಅಂತರದ ತಂತ್ರವನು ಗೆಯ್ಸಿಹಳು ಜಗವಂತು ।
ಸಂತತವು ನವನವವೊ—ಮರುಳ ಮುನಿಯ ॥ ೩೩೫

ದಾರದುಂಡೆಯೊ ಲೋಕ ನೂರುಮಾರೆಳೆಯೊಂದೆ ।
ನೂರು ಬಣ್ಣಗಳಲ್ಲಿ ನೂರು ಸಿಕ್ಕದರೊಳ್ ॥
ಹಾರದಂತದಖಂಡ ಮೊದಲು ಕೊನೆಗಳನಲ್ಲಿ ।
ಬೇರೆ ತೋರುವುದೆಂತೊ—ಮರುಳ ಮುನಿಯ ॥ ೩೩೬

ಅರ್ಧಾರ್ಧರುಚಿಗಳಿಂ ಕಣ್ಮನಂಗಳ ಕೆಣಕು- ।
ತಂದ್ಯಮಂಗಳ ಗೆಯ್ಸಿ ಮನುಜನಿಂ ಪ್ರಕೃತಿ ॥
ಬದ್ಧನಂಗೆಯ್ವಳುಳಿದರ್ಧಮಂ ಕೆಣಕಿಪಳು ।
ವೃದ್ಧಿಯಿಂತವಳ ಸಿರಿ—ಮರುಳ ಮುನಿಯ ॥ ೩೩೭

ಸಾದೃಶ್ಯಭಸ್ಮವನು ಕಣ್ಣಿಗೆರಚುತೆ ಪ್ರಕೃತಿ ।
ಪ್ರತ್ಯೇಕತೆಯುನದರೊಳಿಡುತೆ ಕಚಕುಳಿಯ ॥
ಶತ್ರುಮಿತ್ರಪ್ರಮಾದದ ಗುಳಿಗೆಯುಣಿಸುತ್ತೆ ।
ನೃತ್ಯಕೆಳೆವಳು ಜನವ—ಮರುಳ ಮುನಿಯ ॥ ೩೩೮

ಬಳಿಗೆ ಬಾರೆನ್ನುವಳು ಕರೆ ಕರೆದು ಮುದ್ದಿಪಳು ।
ಫಲಪುಷ್ಪ ಮಣಿಕನಕವಿತ್ತು ನಲಿಸುವಳು ॥
ನಲಿದು ನೀಂ ಮೈಮರೆಯೆ ಮರ್ಮದಲಿ ಚಿವಟುವಳು ।
ಛಲಗಾತಿಯೋ ಪ್ರಕೃತಿ—ಮರುಳ ಮುನಿಯ ॥ ೩೩೯

ಒಲಿದೊಲಿದು ಸಾರುವಳು ಕಣ್ಣೊಳಪ ಬೀರುವಳು ।
ಕಿಲಕಿಲನೆ ನಗಿಸುವಳು ಕಚಕುಳಿಗಳಿಕ್ಕಿ ॥
ಮಲಗಿ ನೀಂ ನಿದ್ರಿಸಿದೆ ಕುಳಿಯೊಳಕ್ಕುರುಳಿಪಳು ।
ಛಲಗಾತಿಯೋ ಪ್ರಕೃತಿ—ಮರುಳ ಮುನಿಯ ॥ ೩೪೦

ಹಾಸ್ಯಬೀಜವೊ ಜೀವಸಸ್ಯವದರಿಂದೆಲ್ಲ ।
ವಿಶ್ವಮಾಯಾವಿಜೃಂಭಣೆಯಿಂದ ಲೋಕ ॥
ಹಾಸ್ಯ ವಿಪರೀತವೇ ಬಿನದವೀಶ್ವರನಿಂಗೆ ।
ನಿಶ್ಚಿತದ ತತ್ತ್ವವಿದು—ಮರುಳ ಮುನಿಯ ॥ ೩೪೧

ಪ್ರಕೃತಿ ಮನುಜನ ಮಾತೆಯುವಳುದರ ಹುಳಿಯಹಾಗೆ ।
ವಿಕೃತನಾಗನೆ ಹಸುಳೆಯಂತರಂಗದಲಿ ? ॥
ಸ್ವಕೃತ ಧರ್ಮದಿನವಂ ಪ್ರಕೃತಿಯುಂ ಮೀರ್ದಂದು ।
ನಿಕೃತಿ ತಪ್ಪುವುದಿಳೆಗೆ—ಮರುಳ ಮುನಿಯ ॥ ೩೪೨

## ಜಗದ್ ಯಂತ್ರ

ಜಗದ ಯಂತ್ರದ ಚಕ್ರಕೀಲ್ಗಳದಿರುವುದುಂಟು ।
ಪ್ರಗತಿಫಲಿತದಿ ವಿಗತಿ ಬೀಜವಿಹುದುಂಟು ॥
ತ್ರಿಗುಣ ಕೃತಿಮ ಮನುಜರಚನೆಯೊಳಗಿರಲಾಗಿ ।
ವೆಗಡು ತಪ್ಪದೊ ನಮಗೆ—ಮರುಳ ಮುನಿಯ ॥ ೩೪೩

ಚಪ್ಪರವ ಪಿಡಿಯದಿಹ ಬಳ್ಳಿಕರಡಾಗಿ ನೆಲ- ।
ವಪ್ಪಿ ಹೂಕಾಯ್ಬಿಡದವೊಲ್ ನರಂ ತನ್ನ ॥
ದುರ್ಬಲದಿ ಸಾಕಾರದೈವಬಲವರಸದಿರೆ ।
ತಬ್ಬಲಿವೊಲಳುತಿಹನೊ—ಮರುಳ ಮುನಿಯ ॥ ೩೪೪

ತರಣಿ ಶಶಿಯುದಿರುತಿರೆ ತಿರೆಯುದಿರಲಿರಲಹುದೆ ।
ನರದೇಹ ಚಿತ್ತಂಗಳುದದಿರದಿಹುವೆ ? ॥
ಸುರಲೋಕ ನರಲೋಕವನ್ಯೋನ್ಯ ಕೀಲುಗಳು ।
ಚರವಿಚರ ಸಮಗಳವು—ಮರುಳ ಮುನಿಯ ॥ ೩೪೫

ಪ್ರಾಕ್ಕರ್ಮತಂತು ನಿನ್ನಡಿಯು ಬಿಗಿದಿರೆ ಮರಕೆ ।
ಹಕ್ಕಿ ನೀಂ ನೆಗೆನೆಗೆದು ಕಿತ್ತಾಡದಿಹೆಯ ? ॥
ರೆಕ್ಕೆ ಬಲವಿದ್ದಂತೆ ಜಗ್ಗುತಿರೆ ಹರಿಯದೇ ।
ನುಕ್ಕಾದೊಡಂ ತಂತು—ಮರುಳ ಮುನಿಯ ॥ ೩೪೬

ತೆರವೆಲ್ಲಿ ಕಾಲದಲಿ ? ಬಿಡುವೆಲ್ಲಿ ಸೃಷ್ಟಿಯಲಿ ।
ಮರಣ ಜನನಗಳು ಸುಖದುಃಖಗಳು ಸುಕೃತ ॥
ದುರಿತಗಳು ವಾಂಛೆ ಪ್ರಯತ್ನಂಗಳೀಯೊಟ್ಟು- ।
ಮಿರದದರೆಕ್ಷಣವುಂಟೆ ?—ಮರುಳ ಮುನಿಯ ॥ ೩೪೭

ಕಾಲವೆಂಬುದನಂತನದಿಯದರ ಅಲೆ ಸಾಂತ ।
ವೇಳೆಯದು ಯುಗ ವರ್ಷ ಮಾಸ ದಿನ ಗಳಿಗೆ ॥
ಪೀಳಿಗೆಗಳವರೊಡನೆ (ಸಕಲ) ಜನಪದ ಜನರು ।
ಲೀಲೆಯದು ಲೆಕ್ಕವಿದು—ಮರುಳ ಮುನಿಯ ॥ ೩೪೮

ಯಂತ್ರದೊಳಗಣ ಯಂತ್ರ, ತಂತ್ರದೊಳಗಣ ತಂತ್ರ ।
ಜಂತುವಿದು ಸೃಷ್ಟಿಯಶಾ ರಸಕಲಾಗ್ರಂಥ ॥
ತಂತುಕಾರಳೆ ಸೃಷ್ಟಿ ರಾಟೆಯಂತ್ರವ ತಿರುಹೆ ? ।
ಮಂತ್ರಯೋಗಿನಿಯವಳು—ಮರುಳ ಮುನಿಯ ॥ ೩೪೯

ಜಂತುದೇಹದ ಯಂತ್ರ ಸಾವಯವ್ಯರಚನೆಯೊಳಂ ।
ಸ್ವಾಂತ ತಂತ್ರದ ಚೋದ್ಯವಿರಿಸಿಹಳ್ ಪ್ರಕೃತಿ ॥
ಹಂತವೇರಲ್ ಜನ್ಮನಿಶ್ರೇಣಿಯೊಳ್ ಜೀವ ।
ತಂತ್ರ ಪಟುತರವಹುದು—ಮರುಳ ಮುನಿಯ ॥ ೩೫೦

## ಜಗನ್ನಾಟಕ

ಸನ್ನಿಭತೆ ನರನರರ್ಗುಂಟು ಕೆಲವಂಶದಲಿ ।
ಭಿನ್ನತೆಯುಮಿಹುದರೊಡನೆ ಕೆಲವಂಶಗಳಲಿ ॥
ಚಿಹ್ನಮಿಶ್ರಣದೆ ದೃಷ್ಟಿಭ್ರಾಂತಿಯಾಗೆ ಜಗ ।
ದನ್ಯೂನ ನಾಟಕವೊ—ಮರುಳ ಮುನಿಯ ॥ ೩೫೧

ಪದನೃತ್ತಗತಿಗುಂಟು ಕಾಲಯತಿಲಯ ನಿಯತಿ ।
ವದನರುಚಿಗುಂಟೆ ನಿಯಮಕ್ರಮ ನಿಬಂಧಂ ? ॥
ವಿಧಿಯುಂ ವಿಪರ್ಯಯಮುಮೊಂದಿರ್ಪ ನಟನದಲಿ ।
ವಿದಿತವಾರ್ಗದರಾಳ ?—ಮರುಳ ಮುನಿಯ ॥ ೩೫೨

ಹಾಸ್ಯದಿನೊ ಕರುಣೆಯಿನೊ ರಾಗದಿನೊ ರೌದ್ರದಿನೊ ।
ಲಾಸ್ಯ ವಿಪರೀತ ಶತವೆಸಗುತಿರೆ ನಟನಂ ॥
ದೃಶ್ಯವ ದಿದೃಕ್ಷು ಪಿಡಿಯುವ ಮುನ್ನ ತನುವಿಪ- ।
ರ್ಯಾಸ್ಯಮಿರಲರಿವೆಂತು ?—ಮರುಳ ಮುನಿಯ ॥ ೩೫೩

ನವನವೋನ್ಮೇಷದಲಿ ಭುವನನಟವಾಡುತಿರೆ ।
ನವಭಾವ ನವರೂಪ ನವನಾಮವವರೆ ॥
ವಿವೃತಿಗೆಂದದನು ನೀಂ ಪಿಡಿವ ಮುನ್ನಮೆ ವಸ್ತು ।
ನವವಿವರ್ತಿತಮಿಹುದೊ—ಮರುಳ ಮುನಿಯ ॥ ೩೫೪

ನಾಟಕವ ನೋಡುವಂಗಾಟದಲಿ ರುಚಿ ಬೇಕು ।
ಬೇಟವೋ ಕಾಟವೋ ಕೆಳೆಯೊ ಪಗೆಯೊ ಅದು ॥
ಆಟವೀ ಜಗವೊಂದು ವೇಷ ನೀನದರೊಳಗೆ ।
ನೋಟನೋಡುವನು ಶಿವ—ಮರುಳ ಮುನಿಯ ॥ ೩೫೫

ಆಟಕೆಂದಳ್ತಿಯಿಂ ಮರಳಿನಲ್ಲಿ ಮನೆಕಟ್ಟಿ ।
ಊಟ ಪಾಟಗಳೆಂದು ನಲಿದಣುಗನೇಕೋ ॥
ನಾಟಕವು ಸಾಕೆಂದು ಮನೆಯನೊದೆದೊಡೆವುದಕೆ ।
ಸಾಟಿಯೋ ಶಿವನೃತ್ಯ—ಮರುಳ ಮುನಿಯ ॥ ೩೫೬

ಸರಸಹೃದಯದ ಸೂರೆಗೊಳುವ ನರ್ತಕಿಯವೊಲ್ ।
ಸ್ವರತಾಳಲಯ ಕ್ಲೃಪ್ತಗತಿಯಿನುರುಕಾಲಂ ॥
ಮರುಳನವೊಲೊವದೆಲ್ಲವನು ಮುರಿಯುತೊಮ್ಮೊಮ್ಮೆ ।
ಪರಶಿವಂ ನರ್ತಿಪನೊ—ಮರುಳ ಮುನಿಯ ॥ ೩೫೭

ಪ್ರಕಟರಂಗಸ್ಥಳದಿ ಗೂಢದಲಿ ಚಲಿಸುತ್ತ ।
ವಿಕಲ ವೇಷಂಗಳನು ನಲಿದು ಬೆರೆಯುತ್ತೆ ॥
ಸಕಲನಾಗಿಯೆ ಮಿಕ್ಕು ತಾನಲ್ಲಿ ರಹಸಿಯದ ।
ವಿಕಟ ರಸಿಕನ ನೆನೆಯೋ—ಮರುಳ ಮುನಿಯ ॥ ೫೮

ಜೀವಿತವೆ ನಾಟಕವೊ ಜೀವವೇ ಸೂತ್ರಧರ ।
ನಾವು ನೀವವರೆಲ್ಲ ಪಾತ್ರಗಳು ವಿವಿಧ ॥
ಭೂವಿಲಾಸವೆ ರಂಗ ಮನುಜ ಕಥೆಯೇ ದೃಶ್ಯ ।
ದೇವನಾ ಲೀಲೆಯಿದು—ಮರುಳ ಮುನಿಯ ॥ ೩೫೯

ನಾಟಕವನಾಡಿದೆಯ ವೇಷವನು ಕಟ್ಟಿದೆಯ ।
ಪಾಟವವ ತೋರಿದೆಯೇನಭಿನಯದ ಕಲೆಯೊಳ್ ? ॥
ನೋಟಕರ್ ಪಟ್ಟರೇಂ ಚಾಕ್ಷುಷಭ್ರಾಂತಿಯನು ।
ಆಟಕಾಟವೆ ವಿಹಿತ—ಮರುಳ ಮುನಿಯ ॥ ೩೬೦

## ವೇಷವೋ ಜಗವೆಲ್ಲ

ವೇಷವೋ ಜಗವೆಲ್ಲ ಜೀವ ನಾಟಕ ವೇಷ ।
ರೋಷ ಮೋಹಗಳ ಮತ್ಸರದಹಂಕೃತಿಯಾ ॥
ಭಾಷೆ ಭೂಷಣದಿಂದ ನೂರಾರು ವೇಷಗಳ ।
ತೋಷಣಂ ದೇವಂಗೆ—ಮರುಳ ಮುನಿಯ ॥ ೩೬೧

ಮಾರನ ಬೆರಲ್ ನಿನಗೆ ಕಚಕುಳಿಯನಿಕ್ಕದಿರೆ ।
ವೈರ ನಿನ್ನೆದೆಯೊಳಕೆ ಹುಳಿಯ ಹಿಂಡದಿರೆ ॥
ಸ್ವಾರಸ್ಯವೇನಿನ್ನು ಜಗದ ನಾಟಕದಲ್ಲಿ ।
ಬೇರು ಸೃಷ್ಟಿಗೆ ಕಾಮ—ಮರುಳ ಮುನಿಯ ॥ ೩೬೨

ಮೂಲ ಸದ್ಬ್ರಹ್ಮದೇಕದ ಬಹುತೆಯೇ ವೇಷ ।
ಕಾಲ ದೇಶದೊಳಾತ್ಮ ಜೀವವಾದುದೆ ವೇಷ ॥
ತಾಳಿ ದೇಹವನಾತ್ಮ ಜೀವವಾದುದೆ ವೇಷ ।
ಲೀಲೆ ವೇಷದ ಸರಣಿ—ಮರುಳ ಮುನಿಯ ॥ ೩೬

ನಟರಾಜನಂಗಾಂಗವಿಕ್ಷೇಪದ ಮಾಯೆ— ।
ಘಟನೆಗಂ ಮಾಪಕನ ನಯನ ಚಾಲನೆಗಂ ॥
ತ್ರುಟಿಮಾತ್ರದನಿವಾರ್ಯ ಭೇದವಿರೆ ವಿಜ್ಞಾನ ।
ಪಟುತೆ ನಿಷ್ಫಲವಲ್ಲಿ—ಮರುಳ ಮುನಿಯ ॥ ೩೬೪

ನರಶತಕ ಶತಲೋಕ ಶವಶತಕವೇಕಶವ ।
ಪರಿಪರಿಯಭಿವ್ಯಕ್ತಿ ಜೀವ ಸತ್ತ್ವವಿರೆ ॥
ಸ್ವಾರಸ್ಯಚಿತ್ರದಿಂ ಚಿತ್ರವೈವಿಧ್ಯದಿಂ ।
ಶಿರವೊ ಸೃಷ್ಟಿಗೆ ವ್ಯಕ್ತಿ—ಮರುಳ ಮುನಿಯ ॥ ೩೬೫

## ಲಲಿತರೌದ್ರಗಳೆ ಜಗ

ಒಲವು ನಲುಮೆಯೆ ಸೃಷ್ಟಿ ಮುಳಿಸು ಮಂಕೇ ಪ್ರಲಯ:— ।
ಜಲಧಿಯಲೆ ಸಂಸಾರಶಿಲೆಯು ನೆಲೆ ಶಾಂತಿ ॥
ಚಲನವಲನವೆ ಮಾಯೆಯಚಲಸಂಸ್ಥಿತಿ ಬೊಮ್ಮ ।
ಲಲಿತರೌದ್ರಗಳೆ ಜಗ—ಮರುಳ ಮುನಿಯ ॥ ೩೬೬

ಜೀವ ಜೀವಗಳು ನದೀಕೂಲಗಳವೊಲು ಬೇರೆ ।
ಜೀವ ಜೀವಗಳು ನದಿನದಿಯಂತೆ ಬೇರೆ ॥
ಜೀವಾತ್ಮಗಳ್ ಪ್ರವಾಹೋರ್ಮಿಗಳವೊಲು ಬೇರೆ ।
ತ್ರೈವಿಧ್ಯವೀಭೇದ—ಮರುಳ ಮುನಿಯ ॥ ೩೬೭

ಏನ ತಾಂ ತಂದುಕೊಂಡಿಹನು ತನ್ನಯ ಬಾಳ್ಗೆ ।
ಮಾನವಂ ಪ್ರಗತಿಯಂ ಸಾಧಿಪುದು ಜಗದೊಳ್ ? ॥
ಆನೆಯಡಿಗದು ಕೀಳ್ತ್ತ ಲತೆ ನಿಗಳವಾದಂತೆ ।
ಜಾಣ್ತನದೆ ತನುಗರಳು—ಮರುಳ ಮುನಿಯ ॥ ೩೬೮

ಅಜವಸ್ತುವೊಂದದರ ಛಾಯೆಯೊಂದೀಯೆರಡೆ ।
ನಿಜಗಳೀ ವಿಶ್ವಜೀವನದ ಲೀಲೆಯಲಿ ॥
ಭಜಿಸಿ ನೀಂ ವಸ್ತುವನು ಛಾಯೆಯಾಟವನಾಡೆ ।
ಮೃಜಿತಮದುಮಪ್ಪುದೆಲೊ—ಮರುಳ ಮುನಿಯ ॥ ೩೬೯

ಸುಳ್ಳೇನೊ ದಿಟವೇನೊ ಜಗದ ನಂಬಿಕೆಗಳಲಿ ।
ಕಲ್ಲೋಲವಹುದು ಮನವಾದೊಡಂಜಿಕೆಯೇಂ ? ॥
ನೆಲ್ಲು ಬಾಣಲಿಯ ಬಿಸಿಯೊಳು ಹೊರಳುತರಳಾಗೆ ।
ಸಲ್ಲುವುದು ಹಿತರುಚಿಗೆ— ಮರುಳ ಮುನಿಯ ॥ ೩೭೦

ಜೀವನವೆ ಸಂಪತ್ತು, ಬೇರೆ ಸಂಪತ್ತೇನು ? ।
ಭೂವಿಯುಚ್ಚಿತ್ರಗಳಿನಗಲ್ದ ತಿಳಿಗಣ್ಣು ॥
ಜೀವಲೋಕದ ದನಿಗೆ ಮರುದನಿಯ ಮಿಡಿಯುವುದೆ ।
ದೈವ ಪ್ರಸಾದವವು—ಮರುಳ ಮುನಿಯ ॥ ೩೭೧

## ಜಗತ್ತೇ ಗುರು

ಗುರುವಿಲ್ಲವೆನಬೇಡ ಜಗವೇ ಜಗದ್ಗುರುವೊ ।
ಅರಿಮಿತ್ರ ವಿಭುಭೃತ್ಯ ಸತಿಪುತ್ರವರ್ಗ ॥
ಪರಿಪರಿಯ ಪಾಠಗಳ ಕಲಿಸುತಿರ್ಪರು ನಿನಗೆ ।
ಅರಿತುಕೊಳಲನುವಾಗು—ಮರುಳ ಮುನಿಯ ॥ ೩೭೨

ಸ್ವಾದುಗಳ ನಾಲಗೆಗೆ ರಾಗಗಳ ಕಂಗಳಿಗೆ ।
ನಾದ ಸರಗಳ ಕಿವಿಗೆ ಸುರಭಿಯನುಸಿರ್ಗೆ ॥
ಮಾಧುರಿಯ ರಸಭಾವಗಳ ಮನಕೆ ಕಲಿಸುತಿರು— ।
ವಾದಿಗುರು ಸೃಷ್ಟಿಯಲೆ—ಮರುಳ ಮುನಿಯ ॥ ೩೭೩

ಅರುಣಿಮೆಯ ಸಂಜೆಗಳ ನೀಲಿಮೆಯ ನಭತಲವ ।
ಹರಿತವನಶಾದ್ವಲವ ತಾಮ್ರಪಲ್ಲವವ ॥
ಪರಿಪರಿಯ ಬಣ್ಣ ಸೊಬಗುಗಳ ಕಣ್ಣಿಗೆ ಕಲಿಪ ।
ಗುರುವಾರು ಪ್ರಕೃತಿಯಲೆ—ಮರುಳ ಮುನಿಯ ॥ ೩೭೪

ಆಗಸದ ಗೋಲಗಳ ಖಗಕುಲೋಡ್ಡೀನಗಳ ।
ಸಾಗರೋರ್ಮಿಗಳ ತರುಶಿರದ ಜಲಕಣದಾ ॥
ಬಾಗು ಗುಂಡುಗಳ ಚಂದವ ಕಣ್ಗೆ ಕಲಿಸುತಿಹ ।
ಮಾಗುರುವು ಸೃಷ್ಟಿಯಲಿ—ಮರುಳ ಮುನಿಯ ॥ ೩೭೫

ರೋಚಕಂಗಳ ರಚಿಸಿ ಭೂ ಭೋಜ್ಯ ಶಾಲೆಯಲಿ ।
ಪಾಚನಕ್ರಮದ ರಸಸಾರ ಸಾಧನೆಗೆ ॥
ಸೂಚಿಸುತ ಸೌಂದರ್ಯ ಮೂಲ ಪಾಠವ ಕಲಿಸು- ।
ವಾಚಾರ್ಯನೇ ಪ್ರಕೃತಿ—ಮರುಳ ಮುನಿಯ ॥ ೩೭೬

ಮರದ ತುದಿಯಲಿ ತನ್ನ ಕೈಗೆಟುಕದಿಹ ಹೂವ- ।
ನರಮೆ ಕಣ್ಣಿಂ ನೋಡಿ ನಲಿಯೆ ಕಲಿತವನು ॥
ಕಿರಿಮೊಗ್ಗು ನೆರೆದರಳುವುದನೋಡಿ ಸುಯ್ವವನು ।
ಗುರುವಾಗಿರಲಿ ನಿನಗೆ—ಮರುಳ ಮುನಿಯ ॥ ೩೭೭

ಮನೆಯೇನಂ ಮಠದಂತೆ ನೀತಿಪಾಠಶಾಲೆ ।
ಅಣಗಿಪುದಹಂಕೃತಿಯ ವಿಗಡತೆಯ ಬಿಡದೆ ॥
ವಿನಯಂಗಳ ಕಲಿಸುವುದು ಜನಹಿತವ ಬೆಳೆಯಿಪುದು ।
ಗುಣ ಶೀಲ ಗುರು ಗೃಹಿತೆ—ಮರುಳ ಮುನಿಯ ॥ ೩೭೮

ಭೃತ್ಯನೆಂತರಿಗುಂ ಸ್ವಕರ್ತವ್ಯಮಂ ಸ್ವಾಮಿಂ ।
ಚಿತ್ತವನು ತಾಂ ಕಾಣದಂದೆನ್ನಬೇಡ ॥
ಪ್ರತ್ಯಹದಿ ನಿನಗೆ ಬಹ ಲೋಕ ಸಂಪರ್ಕದಿನೆ ।
ಕೃತ್ಯಸೂಚನೆ ನಿನಗೆ—ಮರುಳ ಮುನಿಯ ॥ ೩೭೯

ಜೀವನವೆ ಪರಮಗುರು, ಮಿಕ್ಕಗುರುಗಳಿನೇನು ।
ಭಾವಸಂಸ್ಕಾರ ಜೀವಾನುಭವಗಳಿಗೆ ॥
ನೋವು ನಲಿವುಗಳೊಲೆಯು ಸೆಕೆಯು ನಿನ್ನಾತ್ಮಕ್ಕೆ ।
ಪಾವಕವಿಧಾನವೆಲೊ—ಮರುಳ ಮುನಿಯ ॥ ೩೮೦

ಜಗದ ನೀಂ ಕೊಂಡದ್ದೆ ಜಗಕೆ ನೀಂ ಕೊಟ್ಟದ್ದೆ ।
ಮಿಗಿಲಾವುದೆರಡರೊಳು ನಿನ್ನ ಬೆಲೆ (ಏನು ?) ॥
ಬಗೆಯದೀ ಲೆಕ್ಕವನು ಜಗದುಣಿಸನುಂಬವನು ।
ಮೃಗಮಾತ್ರನಲ್ಲವೇಂ ?—ಮರುಳ ಮುನಿಯ ॥ ೩೮೧

## ಸುಖ - ದುಃಖ

ಅಚ್ಚರಿಯೊಳಚ್ಚರಿಯೊ ಸುಖದುಃಖದಾಂತರ್ಯ ।
ಮೆಚ್ಚಿಕೆಯಂದೇಕಿಲ್ಲಿ ? ಕಿಚ್ಚದೇಕಲ್ಲಿ ? ॥
ಬಿಚ್ಚಲಾಗದ ತೊಡಕು ಮನದ ಜಡೆಗಳೊಳಿಹುವು ।
ಸಾಕ್ಷಿಯುದಮೋಯಕ್ಕೆ—ಮರುಳ ಮುನಿಯಂ ॥ ೩೮೨

ಎಲೆ ಹಸಿರು ಹೂ ಬಿಳುಪು ಜಾಜಿಯೊಂದರೊಳೆಂತು ।
ಹುಳಿಸಿಹಿಗಳೊಂದೆ ಮಾವಿನ ಕಾಯೊಳಂತು ॥
ಒಳಿತು ಕೆಡಕಂತು ಮಾಯಾಯಂತ್ರವೊಂದರಿನೆ ।
ನೆಲವೊಂದು ಬೆಳೆ ಹಲವು—ಮರುಳ ಮುನಿಯ ॥ ೩೮೩

ಕಾಲ ನದಿ ವರ್ಷ ಋತು ಮಾಸ ದಿನ ಚಣ ಘಳಿಗೆ ।
ಸಾಲು ಸಾಲಾಗಿ ಪರಿಯುತಿಹುದೆಡೆ ಬಿಡದೆ ॥
ಬಾಳೆಂತು ರಾಜ್ಯ ಪುರ ಪಳ್ಳಿ ಕುಲ ಮನೆಯೆನಿಸಿ ।
ಏಳುವುದು ಬೀಳುವುದು—ಮರುಳ ಮುನಿಯ ॥ ೩೮೪

ತಂದೆ ಮಗ ಬಂಧು ಸಖರೆಂಬ ಋಣಬಂಧದಿಂ ।
ಬಂದಿಯಾಗಿಸಿ ನಿಷ್ಕೃತಿಗಳ ಕೊಳುತ್ತೆ ।
ದ್ವಂದ್ವಾನುಭವದಿಂದೆ ಜೀವವನು ಶೋಧಿಪ್ಪ ।
ಸಂಧಾನ ದೈವಿಕವೊ—ಮರುಳ ಮುನಿಯ ॥ ೩೮೫

ಇಲ್ಲಿ ರವಿ ಮೆರೆವಂದು ಇನ್ನೆಲ್ಲೊ ಕಾರಿರುಳು ।
ಅಲ್ಲಿ ವಿಜಯೋತ್ಸಾಹವಿಲ್ಲಿ ಸೋಲಳುವು ॥
ಉಲ್ಲಾಸವೇಕಿದಕೆ ? ತಲ್ಲಣವದೇಕದಕೆ ? ।
ಎಲ್ಲ ಪ್ರಕೃತಿಯ ಲೀಲೆ—ಮರುಳ ಮುನಿಯ ॥ ೩೮೬

ಬರಿಯಂ ಸದ್ವಸ್ತು ಚಿದ್ವಿರಹಿತವದಿರ್ದೇನು ? ।
ಸ್ಫುರಿಸದುದನಿಹುದೆಂಬುದೆಂತದರಿನೇನು ? ॥
ಅರಿವು—ನಾನ್‌ನೀನೆಂದು ಗುರುತಿಸುವ ಚಿಚ್ಛಕ್ತಿ ।
ಪರವಸ್ತ್ವಭಿವ್ಯಕ್ತಿ—ಮರುಳ ಮುನಿಯ ॥ ೩೮೭

ಮಲರ ಕಂಪಾಕ್ಷಣದ ಗಾಳಿಯಲೆಯೊಳು ಬೆರೆತು ।
ಮಿಳಿತವಪ್ಪುದನಂತಕಾಲಸಾಗರದಿ ॥
ಒಳಿತು ಕೆಡಕುಗಳಂತು ನಿನ್ನ ಬಾಳರಲುಗಳು ।
ನೆಲಸುವವನಂತದಲಿ—ಮರುಳ ಮುನಿಯ ॥ ೩೮೮

ಕರಿಮೋಡ ಬಿಳಿಮೋಡ ಸರಿಪಣೆಯವೊಲು ಪರಿಯೆ ।
ನೆರಳೊಮ್ಮೆ ಬೆಳಕೊಮ್ಮೆ ಮುಸುಕುವುದು ಧರೆಯ ॥
ಕರುಮಮೇಘದಿನಂತು ಮಬ್ಬೊಮ್ಮೆ ತೆರೆವೊಮ್ಮೆ ।
ಬರುತಿಹುದು ಬಾಳಿನಲಿ—ಮರುಳ ಮುನಿಯ ॥ ೩೮೯

## ಸುಖ ವಿವೇಕ

ಎಡಬಲಗಳೆಣಿಕೆಗಳು ಬುಡ ತಲೆಯು ಗಣನೆಗಳು ।
ಕಡೆ ಮೊದಲು ಲೆಕ್ಕಗಳು ಜಡ ಜೀವಭೇದ ॥
ಕೆಡಕು ಮತಿಯೇನಲ್ಲ, ಬದುಕಿಗದು ಸೌಕರ್ಯ ।
ಪೊಡವಿಯು ವಿವೇಕವದು—ಮರುಳ ಮುನಿಯ ॥ ೩೯೦

ನರದೇಹದಿಂದ ದುರ್ವಾಸನೆಗಳೊಗೆವಂತೆ ।
ಪರಿಮಳಗಳದರಿಂದಲೊಗೆದು ಸೊಗಯಿಪುವೇ ? ॥
ಮರುಗದೆಲೆಯಲಿ ಸುರಭಿ ಮಲ್ಲಿಗೆಯರಲ್ ಸುರಭಿ ।
ನರಸುರಭಿಯಾತ್ಮದಲಿ—ಮರುಳ ಮುನಿಯ ॥ ೩೯೧

ದಡದಿಂದ ತೆರೆಗಳಾಟವ ನೋಡಿ ನಲಿವವನು ।
ಅಡಿಗಳನು ತೆರೆ ಬಡಿದು ತೊಳೆಯ ನಲಿವವನು ॥
ಪಿಡಿದುಸಿರ ತಳಕಿಳಿದು ಮುಳುಗುವವ ಮತ್ತೊಬ್ಬ ।
ಕಡಲ ಸುಖ ಮೂರು ತೆರ—ಮರುಳ ಮುನಿಯ ॥ ೩೯೨

ದಡದಿನಲೆಸಾಲ್ಗಳಾಟಗಳ ನೋಳ್ಪನದೊಬ್ಬ– ।
ನಡಿಯನಲೆ ಒಡಿದು ತೊಳೆವುದ ನೋಳ್ಪನೊಬ್ಬ ॥
ಪಿಡಿದುಸಿರ ತಳಕೆ ಮುಳುಗುಂತನೋಳ್ಪನಿನ್ನೊಬ್ಬ ।
ಕಡಲಸೊಗ ಮೂವರಿಗೆ—ಮರುಳ ಮುನಿಯ ॥ ೩೯೩

ತುರಿ ವಂದ ಮೈಯ ಬೆರಲಿಂ ಕೆರೆವುದೊಂದು ಸುಖ ।
ಎರದು ಬಿಸಿನೀರ ಪಲ್ಕಿರಿವುದೊಂದು ಸುಖ ॥
ಉರಿಯೊಂದು ಲೇಪಗಳ ಸವರಲಿನ್ನೊಂದು ಸುಖ ।
ನರಸುಖಗಳಿವು ತಾನೆ ?—ಮರುಳ ಮುನಿಯ ॥ ೩೯೪

ಬ್ರಹ್ಮ ವಿಭು ಜಗಕೆಂದು ಜನ ನೆನೆದು ನಡೆವಂದು ।
ಕರ್ಮಫಲವೆಂದು ಲಬ್ಧವ ಭುಜಿಸುವಂದು ॥
ಧರ್ಮವಲ್ಲದ ಭಾಗ್ಯ ವಿಷವೆಂದು ತೊರೆವಂದು ।
ನೆಮ್ಮದಿಯೊ ಲೋಕದಲಿ—ಮರುಳ ಮುನಿಯ ॥ ೩೯೫

## ಹರದಾಡುತಿದೆ ಲೋಕ

ಏನೆಂದು ರಚಿಸಿದನೊ ಧಾತನೀ ಜಂತುವನು ।
ಮಾನಿಸನೆನಿಪ್ಪ ಮೃಗ ದೈವ ಸಂಕರವ ॥
ಬಾನಿಗೆರಗುವನೊಮ್ಮೆ ಮಣ್ಣಿಗೆರಗುವನೊಮ್ಮೆ ।
ತಾಣವೊಂದರೊಳಿರನು—ಮರುಳ ಮುನಿಯ ॥ ೩೯೬

ಮರಣವೇ ಮುಗಿವಲ್ಲ, ಜನನವೇ ಮೊದಲಲ್ಲ ।
ತೆರೆಯ ಬೀಳೇಳುಗಳು ಕಾಲನದಿಯೊಳವು ॥
ಪರಿಪರಿಯ ರೂಪು ತಳೆಯುವುದೊಂದೆ ವಾರಿಕಣ ।
ಪರಿದಾಟವದರಾಟ—ಮರುಳ ಮುನಿಯ ॥ ೩೯೭

ತೇಗುತಿರುವನು ಧನಿಕ, ಕರುಬುತಿರುವನು ಬಡವ ।
ರೇಗುತಿರುವನು ಬಡವ, ಕೆರಳುವನು ಧನಿಕ ॥
ಕೂಗುಗಳು ಧರೆಯೊಳಿಂತನ್ಯೋನ್ಯ ಬೀಜಗಳು ।
ರೋಗದುಸಿರುಗಳಂತೆ—ಮರುಳ ಮುನಿಯ ॥ ೩೯೮

ಧನಿಯ ವಾಂತಿಯ ನಾತ ನೆರೆಮನೆಯ ಬಡವಂಗೆ ।
ಉಣದ ಬಡವನ ಹಸಿವು ಗೋಳು ಧನಿಕಿವಿಗೆ ॥
ವಿನಿಮಯವಿದನ್ಯೋನ್ಯ ವಿಧಿಯ ಮಾರ್ಕಟ್ಟೆಯಲಿ ।
ಅಣಕಿಗರ ಸಂತೆ ಜಗ—ಮರುಳ ಮುನಿಯ ॥

ಅರಿವೆಗೆಂದೆಳೆದ ನೂಲುರುಳುರುಳೆಯಾಗಿ ಕೈ ।
ಕೊರಳು ಕಾಲ್ಗಳ ಸುತ್ತಿ ಬಿಗಿದು ತೊಡಕಾಗಿ ॥
ಸೆರೆವಿಡಿಯೆ ದಿಕ್ಕುತೋರದಿರೆ ಕಣ್ಕಣ್ ಬಿಡುತೆ ।
ಕಿರಿಚುತಿರುವನು ನರನು—ಮರುಳ ಮುನಿಯ ॥ ೪೮೦

ಈ ದಡದಿನಾದಡಕ್ಕಾದಡದಿನೀದಡ– ।
ಕ್ಕೋಡುತೆಡೆಬಿಡದಲೆವುದಲೆಸಾಲು ಕಡಲೊಳ್ ॥
ಆ ಧೋರಣೆಯೆ ಜಗದಿ ಜೀವಿಗಳ ಪರಿದಾಟ ।
ನೋಡು ನೀನಾಳದಲಿ—ಮರುಳ ಮುನಿಯ ॥ ೪೮೧

ಈ ದಡದಿನಾದಡಕ್ಕಾದಡದಿನೀದಡ– ।
ಕ್ಕೋಡಾಡುವುದು ಕಡಲಿನಲೆಸಾಲು ಬಿಡದೆ ॥
ಸಾಧಿಪ್ಪುದೇನನದು ಕದಲುತಿತ್ತತ್ತಲುಂ ।
ಆದರ್ಶ ನಮಗದುವೆ !—ಮರುಳ ಮುನಿಯ ॥ ೪೮೨

ಅಬ್ಬಬ್ಬ ಲೋಕವೇಂ ಬೊಬ್ಬೆಯಿಡುತಿಹುದಿಂತು ।
ತಬ್ಬಿಬ್ಬಲಾಗಿಹುದು ನೆಲೆಗಾಣದಿಹುದು ॥
ಮಬ್ಬಿನಲಿ ಭೂತ ಚೀರಾಡುತಲೆವಂತಿಹುದು ।
ತಬ್ಬಲಿಯೆ ಶಿವಸೃಷ್ಟಿ ?— ಮರುಳ ಮುನಿಯ ॥ ೪೮೩

ಏನಿಂದು ಜನದ ಗತಿಯೇತಕಸ್ವಸ್ಥಮತಿ ।
ಬೇನೆ ಪಿರಿತೆಂದುಮರಿಯದುದೇತಕಿಂದು ? ॥
ತಾಣಗೆಟ್ಟಲೆಯುತಿರ್ಪ ಪ್ರೇತದಂತೇಕೆ ।
ಮಾನವರ ತಲ್ಲಣವೊ—ಮರುಳ ಮುನಿಯ ॥ ೪೮೪

ಒಂಟಿ ಬಾಳರೆಬಾಳು ಕರೆಕರೆಯು ಕೊರೆಗುಬಾಳ್ ।
ನಂಟು ಬಾಳೇನ್ ಕುಂಟ ಕಾದಾಟ ಗೋಳು ॥
ಅಂಟಿರ್ದ್ದುಮಂಟದುದು ಜಾಣಬಾಳ್ ಬ್ರಹ್ಮನದು ।
ತುಂಟಾಟವೋ ಲೋಕ—ಮರುಳ ಮುನಿಯ ॥ ೪೦೫

## ಲೋಕ ವೈವಿಧ್ಯ

ದಿನದಿನದೊಳಂ ಪುನರ್ಜನುಮಪೆತ್ತುತ್ತಿಹರು ।
ಮನುಜನುಂ ಪ್ರಕೃತಿಯುಂ ಸಂಸರ್ಗವಶದಿಂ ॥
ಗುಣ ಶಕ್ತಿಯೋಗ ಭೇದಂಗಳಿಂ ನವನವತೆ— ।
ಯನವರತಮೊದಗಿಹುದು—ಮರುಳ ಮುನಿಯ ॥ ೪೦೬

ಭಾನು ನಿಯತಾವರ್ತನೆಯಿನನಂತಕೆ ಕಾಲ ।
ಮಾನವಾಗಿಸಿ ಕಾಲಯೋನಿಯಿನನಂತಂ ॥
ಪ್ರಾಣಿರೂಪದಿ ಜನಿಪವೊಲು ತೋರಿಪ ನಿಸರ್ಗ- ।
ದಾನಂತ್ಯ ಲೀಲೆಯೆಲೊ—ಮರುಳ ಮುನಿಯ ॥ ೪೦೭

ವಿಶ್ವವೇಂ ನಶ್ವರವೆ ? ಬರಿಗಾಳಿ ಸುಳಿಯೆ ? ಇದು ।
ನಶ್ವರಾಕಾರಿಗಳ ಶಾಶ್ವತಗ್ರಾಮ ॥
ಐಶ್ವರ್ಯವೊಂದೊಂದು ಗಳಿಗೆಯೊಳಮುಮರಿಹುದು ।
ವಿಶ್ವಾತ್ಮಲಕ್ಷ್ಯನಿಗೆ—ಮರುಳ ಮುನಿಯ ॥ ೪೦೮

ಸಾಂತ ಜಗವಿದನಂತದೊಂದು ದರ್ಶನಖಂಡ ।
ಸ್ವಾಂತಕರಿದಾಕಾರ ಮಿತಿಯಿರದ ವಸ್ತು ॥
ಅಂತರವ ನೋಡಲಾಖಂಡದೊಳಗಮನಂತ ;
ತಂತುವೊಳು ಪಟದಂತೆ—ಮರುಳ ಮುನಿಯ ॥ ೪೦೯

ಮಾಡಿದುದ ಮತ್ತೆ ಮಾಡಳ್ ಪ್ರಕೃತಿ ಕೃತಿಚತುರೆ ।
ಗೂಢ ಭೇದವನಿರಿಸಿಹಳು ರೂಪ ಸಮದೊಳ್ ॥
ಮೋಡವೆರೆಡು ಕ್ಷಣದೊಳೊಂದಂವಿದ್ದೀತೆ ? ।
ಕ್ರೀಡೆ ವಿವಿಧತೆ ನವತೆ—ಮರುಳ ಮುನಿಯ ॥ ೪೧೦

ವ್ಯತ್ಯಯುವನಾನುತಿರೆ ಭೂನಭೋಗ್ರಹ ವೀಥಿ ।
ರಥ್ಯೆಯೊಂದರೊಳೆಂತು ಮನುಜಗತಿ ನಿಲ್ಗುಂ ? ॥
ನಿತ್ಯವೀ ಸೃಷ್ಟಿನದಿಯದರ ನೀರಲೆಮಾತ್ರ ।
ಪ್ರತ್ಯೇಕವನುಚಣಂ—ಮರುಳ ಮುನಿಯ ॥ ೪೧೧

ಧರಣಿಯವೌತಣದಿಂದ ನರನ ಮನಸಿಗೆ ವಿಕೃತಿ ।
ನರನ ಕೃತ್ಯಂಗಳಿಂ ಧರಣಿಗಂ ವಿಕೃತಿ ॥
ಪರಿಣಾಮವನ್ಯೋನ್ಯವಿಂತು ಸಂತತವಿರಲು ।
ಸ್ಥಿರತೆ ಲೋಕಕ್ಕೆಂತು ?—ಮರುಳ ಮುನಿಯ ॥ ೪೧೨

ಗುಣ ಶಕ್ತಿ ವೈವಿಧ್ಯ ಸಾಜವಿಹುದದರಿಂದ ।
ಗಣಿತಮದರಿಂ ಸಾಜ ಮನುಷ ಜೀವಿತಕೆ ॥
ಗಣದೊಳೊಳ್ಳಿತನೆಣಿಸಿ ಬಿಡಿನರನಹಂಭಾವ- ।
ವೆಣಿಸದಿರೆ ತಪ್ಪೇನು ?—ಮರುಳ ಮುನಿಯ ॥ ೪೧೩

ಗುಣಶಕ್ತಿಗಳ ಸೃಷ್ಟಿಯನುವಂಶ ಪ್ರತ್ಯೇಕ ।
ಜನ ಜನದೊಳಿರಿಸಿರ್ಪಳನ್ಯೋನ್ಯಮವರು ॥
ವಿನಿಮಯ ನ್ಯಾಯದಿಂ ಕೊರತೆಯಂ ತುಂಬುತ್ತ ।
ಅನುವಹುದು ಕಲಿಯಲ್ಕೆ—ಮರುಳ ಮುನಿಯ ॥ ೪೧೪

ವಸ್ತುಗ್ರಹಣವೈದು ಬೆರಲ್ಗಳಸಮತೆಯಿಂದ ।
ಸ್ವಸ್ತಿಯಂ ಸಮಾಜಕ್ಕೆ ವಿವಿಧಕರಣಂಗಳ್ ॥
ಒಟ್ಟಿನೊಳ್ಳಿತ ಮಾಡೆ ಶಕ್ತಿ ಗುಣಭೇದಗಳು ।
ಯುಕ್ತವಹ ತತ್ತ್ವವದು—ಮರುಳ ಮುನಿಯ ॥ ೪೧೫

## ಬದುಕೆಲ್ಲರಂತೆ

ಬದುಕು ಬದುಕೇ ಬದುಕಿನೆಂದು ಬಿಡುಗಡೆ ನಿನಗೆ ।
ಬದುಕೆಲ್ಲರಂತೆ ಎಲ್ಲದರಲ್ಲಿ ಕಲೆತು ॥
ಎದುರಿಸು ವಿಧಿ ಗೈವ ಶಿಕ್ಷೆ–ಪರೀಕ್ಷೆಗಳಲಿ ನೀಂ ।
ಸುಧೆ ತಳದಲಿಹುದೆಲವೊ—ಮರುಳ ಮುನಿಯ ॥ ೪೧೬

ಭಕ್ಷಣವನಿತ್ತಂದು ತಂದೆ ನಿನಗಾದವನು ।
ಶಿಕ್ಷಣಕೆ ಕೋಲ್ಪಿಡಿಯೆ ಶತ್ರುವಾದಾನೆ ? ॥
ಅಕ್ಷಿಗೆಟುಕದ ಶಕ್ತಿಯೊಂದತ್ತಣಿನೊ ನಿನ್ನ ।
ವೀಕ್ಷಿಸುತ ನಡೆಸುವುದೊ—ಮರುಳ ಮುನಿಯ ॥ ೪೧೭

ಮನಸಿನ ವ್ಯಾಧಿಯೇಂ ತನುವಿನ ವ್ಯಾಧಿವೊಲೆ
ಜನಿಸುವುದದಾವುದೋ ಪ್ರಾಚೀನ ಕೃತದಿಂ ॥
ಅನುಭವಿಸಿದಲ್ಲದದು ಮುಗಿಯದೇಂಗೆಯ್ದೊಡಂ ।
ಮನವಗ್ನಿಪರ್ವತವೊ—ಮರುಳ ಮುನಿಯ ॥ ೪೧೮

## ತೋರಿಕೆಗೆ ಕಹಿ

ಭೋಗ ರೋಗ ವಿಯೋಗ ದಾರಿದ್ರ್ಯ ಚಿಂತೆಗಳ ।
ಬೇಗೆಯಲಿ ಮಾನಸದ ಹಸಿರು ಮಾಗಾಯಿ ॥
ಮಾಗಿ ಹಣ್ಣಾಗುವುದು ಹುಳಿಯೆ ಜೇನಾಗುವುದು ।
ಭೂಗೋಲದಮೃತವದು—ಮರುಳ ಮುನಿಯ ॥ ೪೧೯

ಕಹಿಕಷಾಯುವದೆಂದು, ಕಾರಚೂರ್ಣಮದೆಂದು ।
ಸಿಹಿಯಂ ಲೇಹ್ಯಮದೆಂದು ನಿನಗೆ ಹಿತವಹುದೋ ॥
ವಿಹಿತ ಗೈವನು ವೈದ್ಯ ನೀನಲ್ಲ, ರೋಗಿ ನೀಂ ।
ಗ್ರಹಿಸು ವಿಧಿಯೌಷಧವ—ಮರುಳ ಮುನಿಯ ॥ ೪೨೦

ನಾಲಗೆಗೆ ಜೇನಾದ ಪಾನ ಕರುಳಿಗೆ ಸೀಗೆ ।
ಕೇಳಲಿಂಚರವೆ ಕಿವಿ ಕಂಗಳಲಿ ಮಂಜು ॥
ಮೇಲೊಡಲ ಸೊಗವೊಳಗಣಾತ್ಮವನು ತೊಳೆದೀತು ।
ಲೀಲೆಯುಂ ಕ್ಷಾಲಕವೊ—ಮರುಳ ಮುನಿಯ ॥ ೪೨೧

ಕುದಿ ಕುದಿದು ಬಿಸಿಯಾರಿ ಮನ ತಣ್ಣಗಾದಂದು ।
ಬೆದಬೆದಕಿ ಕೈಸೋತು ಹುರುಡಡಗಿದಂದು ॥
ಸೊದೆಗೆಂದು ಕಾದ ತುಟಿ ಸೊರಗಿ ತರಗಾದಂದು ।
ಉದಯ ನವಯುಗ ನಿನಗೆ—ಮರುಳ ಮುನಿಯ ॥ ೪೨೨

ಬೇರಿನಲಿ ಮಣ್ಕಂಪು ಕಸಿರು ಕಂಪೆಲೆಗಳಲಿ ।
ಸೌರಭವು ಮಲ್ಲಿಗೆಯ ಹೂವಿನಲಿ ಮಾತ್ರ ॥
ಸಾರಪಾಕಕ್ರಮವಿದೀ ಸೃಷ್ಟಿಭಟ್ಟಿಯಲಿ ।
ಕ್ಷೀರ ಹುಲ್ಲಿಂದಲ್ತೆ—ಮರುಳ ಮುನಿಯ ॥ ೪೨೩

ಹುಳಿ ಮಾವಿನೆಳೆಕಾಯಿ ಮಾಗಿದರೆ ಮಧುಖಂಡ ।
ಹಲವುದಿನವಿನ್ನುಮಿರೆ ತಾನೆ ಕೊಳೆಯುವುದು ॥
ಇಳಿವುದಿಂತೊಳಿತು ಹೊಲಸಿಂ ಹೊಲಸಿನಿಂದೊಳಿತು ।
ಫಲವೊಂದೆ ಹತ್ತು ರುಚಿ—ಮರುಳ ಮುನಿಯ ॥ ೪೨೪

ಸಿಹಿಯರಾಗಿ ನಾಲಗೆಗೆ ಹುಳಿಯರಾಗಿ ಹಲ್ಗಳಿಗೆ।
ಕಹಿಯರಾಗಿ ಗಂಟಲಿಗೆ ಮಣಸಾತ್ಮರಾಗಿ॥
ಬಹುವಿಧದ ಸವಿನೋಡು ಸಂಸಾರ ವೃಕ್ಷಫಲ।
ಸಹಿಸಿದನಂ ವಹಿಸಿದನಂ—ಮರುಳ ಮುನಿಯಂ॥ ೪೨೫

ಅಳುವಿಂದೆ ನಗುವಿಂದೆ ಕಳವಳದ ಸುಯ್ಲಿಂದೆ।
ಚಲುವಿಕೆಯಿಂ ಜೋಪಿಂದೆ ನಲುಮೆಯಿಂದೆ॥
ಕಳೆಯಂ ಕಂಬನಿಯಿಂದೆ ಹಗೆಯು ಬಿಸಿ ಬೆವರಿಂದೆ।
ಜಳಕವೋ ಜೀವಕ್ಕೆ—ಮರುಳ ಮುನಿಯ॥ ೪೨೬

ಕವಡೆರಡು ಸೀಳ್ಗ ಮನುಜಸ್ವಭಾವದ ಹೊನಲ್।
ಪ್ರವಹಿಕುಂ ಸ್ವಾರ್ಥತೆ ಪರಾರ್ಥತೆಗಳಾಗಿ॥
ಜವುಗು ಹಳ್ಳದಿ ನಿಂತು ನಾರ್ವುದೊಂದಿನ್ನೊಂದು।
ವೆವಸಾಯಂಕೊದಗುವುದು—ಮರುಳ ಮುನಿಯ॥ ೪೨೭

ತಿಕ್ತಾಮ್ಲ ಕಟುಲವಣವಿರದೆ ಭೋಜನವೇನಂ?।
ರಕ್ತಿ ರಭಸಗಳಿರದೆ ಜೀವಿತವದೇನು?॥
ವ್ಯಕ್ತಿ ಕಾಮಕ್ರೋಧಮದಮತ್ಸರಗಳಿರದೆ।
ಶಕ್ತಿಯೆಂ ಸೃಷ್ಟಿಯಲಿ?—ಮರುಳ ಮುನಿಯ॥ ೪೨೮

## ಸಾವಿಗಂಜುವುದೇಕೆ?

ಜೀವ ಹೊರೆಯೇನಲ್ಲ, ಬಿಸುಡೆನುವುದೇಕದನು?।
ಸಾವು ನಷ್ಟವುಮಲ್ಲ, ಸಾಯೆ ಭಯವೇಕೆ?॥
ಜೀವಕಂ ಸಾವಿಗಂ ಸಮಸಿದ್ಧನಾದವನೆ।
ಕೋವಿದನು ತತ್ತ್ವದಲಿ—ಮರುಳ ಮುನಿಯ॥ ೪೨೯

ಜನ್ಮಕಥೆ ಮುಗಿಯುವುದು ಸಂಸ್ಕಾರವುಳಿಯುವುದು ।
ನಿರ್ಮಲದ ಸುಕೃತವಾಸನೆಗಳುಳಿದಿರುವೊಲ್ ॥
ಜನ್ಮಾಂತರವುಮೆಮಗದೊಂದಾತ್ಮ ಲಾಭವಲ ।
ಬ್ರಹ್ಮಸೋಪಾನವದು—ಮರುಳ ಮುನಿಯ ॥ ೪೩೦

ನಡೆಯಲಾಗಿಹ ಕಾಲು ನಡೆನಡೆದೆ ಕುಸಿಯುವುದು ।
ನುಡಿಯಲಿಹ ಬಾಯಿ ನುಡಿನುಡಿದು ಸೇದುವುದು ॥
ದುಡಿಯಲೆಂದಿಹ ಕೈಯಿ ದುಡಿದುಡಿಯುತದಿರುವುದು ।
ಪಡುವ ಬಾಳ್ವೆಯೆ ಮಡಿತ—ಮರುಳ ಮುನಿಯ ॥ ೪೩೧

ಮೃತ್ಯುವನು ಹೊತ್ತಿರ್ಪರೆಲ್ಲರುಂ ತಮ್ಮೊಳಗೆ ।
ತುತ್ತನಗಿದಗಿದೆ ಸವೆವುದು ಪಲ್ಲಸಾಲು ॥
ರಥಚಕ್ರಗಳರೆದುಕೊಳ್ಳುವುವು ತಮ್ಮತಾಂ ।
ಕೃತ್ಯಕರಣವೆ ಮೃತ್ಯು—ಮರುಳ ಮುನಿಯ ॥ ೪೩೨

ಇರುವುದೇಕಿರಬೇಕದೇತಕೆನ್ನುವ ಸಖನೆ ।
ಇರದೆ ನೀನೇನಪ್ಪೆ ? ಬಯಸುವೆಯುದೇನನ್ ? ॥
ಇರುವುದಿಂತಿಲ್ಲದೊಡೆ ಮತ್ತೆಂತೊ ನಿಲುವುದದು ।
ಮರಣ ಬರಿ ಮಾರ್ಪಾಟು—ಮರುಳ ಮುನಿಯ ॥ ೪೩೩

## ಸ್ವಸ್ವಭಾವವೆ ಮರಣ

ವಿಶ್ವಯಂತ್ರದ ಚಕ್ರ ಕೀಲ್ಕೊಂಡಿ ಕಡ್ಡಿಗಳು ।
ಭಾಸ್ವದಾದಿಗ್ರಹಮುವಿಳೆಯು ಶಿಲೆ ಜಲಮುಂ ॥
ಸ್ವಸ್ವಗುಣಕೃತ್ಯದಿನೆ ನಿಚ್ಚಮುಂ ಸವೆಯುವುವು ।
ಸ್ವಸ್ವಭಾವವೆ ಮರಣ—ಮರುಳ ಮುನಿಯ ॥ ೪೩೪

ಸವೆಯಿಪುದು ಶಿಲೆಯು ಗಾಳಿಗಳುಜ್ಜಿ ನೆಲವ ಜಲ।
ಸವೆಯಿಪನು ಜಲವ ರವಿ ಎಲ್ಲವೆಲ್ಲರನು॥
ಸವೆಯಿಪುದು ತನುವ ಮನಸಿನ ಕೊರಗು ಕೆಣಕುಗಳು।
ಜವನು ಜಗದುಜ್ಜಿಕೆಯೊ—ಮರುಳ ಮುನಿಯ॥ ೪೩೫

ನರನಾರಿಯುರ ತೊಡಕು ಸಿರಿಯು ಕರುಬಿನ ಕುಟುಕ।
ಹಿರಿಮೆ ಕಿರಿಮೆಯು ಕಿರಕು ಜಗದೊಳಿರದಂದು॥
ಪರಮೇಷ್ಠಿಯಶವೆಲ್ಲಿ ? ಪ್ರಕೃತಿಸಂತತಿಯೆಲ್ಲಿ ? ।
ಕರಗುವುದಲಾ ಸೃಷ್ಟಿ—ಮರುಳ ಮುನಿಯ॥ ೪೩೬

ಮರಣಮೇಂ ಜೀವನಾಟಕದ ಚರಮಾಂಕಮೇಂ ? ।
ಬರಿಯ ವಿಷ್ಕಂಭಮದು ಕತೆಯು ಮುಂಬರಿಗುಂ॥
ನರನೊ ಖರನೋ ಮರನೊ ತಾನಾಗಿ (ನಿತ್ಯನಟ)।
ಮರಳಿ ಬಾರನೆ ಭುವಿಗೆ ?—ಮರುಳ ಮುನಿಯ॥ ೪೩೭

## ಕೋಟಲೆಯು ಸವಿ ಬಾಳ್ಗೆ

ಓಟದಲಿ ಚಂಡು ನೆಗೆದತ್ತಿತ್ತ ತಿರುಗದಿರೆ।
ಏಟುಪೋಟುಗಳಾಡುವರ್ಗೆ ತಾಕದಿರೆ॥
ಆಟದಲಿ ರುಚಿಯೇನು ನೋಟದಲಿ ಸೊಗವೇನು।
ಕೋಟಲೆಯು ಸವಿ ಬಾಳ್ಗೆ—ಮರುಳ ಮುನಿಯ॥ ೪೩೮

ಮೂಲದಲಿ ಸತ್ ಒಂದು ಮೇಲ್ಮೇಲೆ ನೂರ್ಕೋಟಿ।
ಆಳದಲಿ ಸ್ವಚ್ಛ ಮೇಲ್ದರ ಚಿತ್ರ ಶಬಲ॥
ಕ್ಷ್ವೇಲ ಸುಧೆಗಳ ಬೆರಕೆಯುದೆ ಸಾಲು ಜೀವನವು।
ಬಾಳಕಳೆ ಸುಧೆಯಾಗ—ಮರುಳ ಮುನಿಯ॥ ೪೩೯

ಹೊರಜಗದೊಳೆಂತೊ ನಿನ್ನೊಳಜಗದೊಳಗಮಂತು ।
ಇರುಳು ಹಗಲುಗಳುಂಟು ಶಶಿರವಿಗಳುಂಟು ॥
ಕುರುಡು ಕತ್ತಲೆಯುಂಟು ಮುಗಿಲು ಸಿಡಿಲುಗಳುಂಟು ।
ಅರುಣೋದಯವುಮುಂಟು—ಮರುಳ ಮುನಿಯ ॥ ೪೪೦

ಲೋಕಪತಿಯೇಂ ನಿರಂಕುಶರಾಜನವೊಲಿಹನೆ ? ।
ಸ್ವೀಕರಿಸಿಹಂ ನ್ಯಾಯವಿಧಿಯೊಂದನವನು ॥
ಪಾಕವಂ ಗೆಯ್ದುದನುಣಲ್ ಸ್ವತಂತ್ರಂ ನರನು ।
ವೈಕಲ್ಪವಿಲ್ಲದಕೆ—ಮರುಳ ಮುನಿಯ ॥ ೪೪೧

ದೈವ ತೋರುವುದು ಕರವಾಳ ವರದಾನಗಳ ।
ಆವಂದದಾವುದೋ ನಿನಗೆ ಗೊತ್ತಿಲ್ಲ ॥
ನೋವಲ್ತೊಡಲಗಟ್ಟಿಯನಳೆವುಪಾಯವದು ।
ದೈವ ಸತ್ತ್ವಪರೀಕ್ಷೆ—ಮರುಳ ಮುನಿಯ ॥ ೪೪೨

ಸುರರುಮಸುರರುಮೊಂದಿ ಕಡೆದ ಕಡಲಾವುದದು ? ।
ಸುರೆಸುಧೆಗಳೆರಡರಲಿ ವಿಷಗಳೆರಡರಲಿ ॥
ಬೆರೆತೆರಡ ಮನುಜ ಬೇರ್ಪಡಿಪ, ಮಂಥನಯಷ್ಟಿ ।
ನರವಿವೇಕದ ಶಕ್ತಿ—ಮರುಳ ಮುನಿಯ ॥ ೪೪೩

ಅದು ಇದೆನ್ನುವ ಗುರುತ ನೆನಪಿಗಾಗಿಪ ಶಕ್ತಿ ।
ಎದುರಿರದನೆದುರಿಹುದಕೊಂದಿಸುವ ಶಕ್ತಿ ॥
ತದಿದಮೆನಿಸುತಲೆಲ್ಲ ದೂರವಳಿಸುವ ಶಕ್ತಿ ।
ಚಿದಖಂಡ ಶಕ್ತಿಯೆಲೊ—ಮರುಳ ಮುನಿಯ ॥ ೪೪೪

ಮೊಟ್ಟೆಗಳನಿಕ್ಕಿ ತಾನೇ ನುಂಗುವಹಿಯಂತೆ ।
ಸೃಷ್ಟಿಯುಣುವಳು ತಾನೆ ತನ್ನ ಸಂತತಿಯ ॥
ಸತ್ತುದೇನ್ ? ಎಲ್ಲ ಹೊಸ ಬೆಳಗೆ ಗೊಬ್ಬರವಾಯ್ತು ।
ನಷ್ಟಕಡೆಗೊಡಳವಳು—ಮರುಳ ಮುನಿಯ ॥ ೪೪೫

## ವ್ಯಷ್ಟಿಯಿಂದ ಸಮಷ್ಟಿ

ವ್ಯಷ್ಟಿ ವಸ್ತು ಫಲಂ ಸಮಷ್ಟಿಪ್ರಯೋಜನದಿ ।
ಪುಷ್ಟಿ ವ್ಯಷ್ಟಿಗೆ (ಬಹುದು) ಸಮಷ್ಟಿಬಲದಿಂದ ॥
ವ್ಯಷ್ಟಿ ಸಾಮಷ್ಟ್ಯಮಿಂತನ್ಯೋನ್ಯಯೋಜಿತಂ ।
ತುಷ್ಟಿಯುಭಯಕುಮಿರ್ಕೆ—ಮರುಳ ಮುನಿಯ ॥ ೪೪೬

ನಗುವನಿಗಮಳುವನಿಗಮವಯವಗಳೊಂದೆ ಸಮ ।
ಮೊಗದ ಗೆರೆ ಕೊರಲ ಸೊಟ್ಟುಗಳನಿತೆ ಭೇದ ॥
ಬಗೆಬಗೆಯ ಜನದೊಳೊರ್ವನನಿನ್ನದೊರ್ವನಿಂ ।
ಮಿಗಿಸುಗುಂ ವ್ಯಕ್ತಿತನ—ಮರುಳ ಮುನಿಯ ॥ ೪೪೭

ವ್ಯಷ್ಟಿವಿಕಸನ ಹೂವು ಕುಲರಾಷ್ಟ್ರಲೋಕಸಂ-।
ಸೃಷ್ಟಿಗಳು ಬೇರು ಧಾರ್ಮಿಕಜೀವತರುಗೆ ॥
ಪುಷ್ಪಂ ವಿವೇಕದಿಂ ಸೃಷ್ಟಿಕುಟಿಲಾತಿಗಂ ।
ನಿಷ್ಕವದು ಬೊಮ್ಮದಲಿ—ಮರುಳ ಮುನಿಯ ॥ ೪೪೮

ತತ್ತ್ವವೇಕವದೇಕನೇಕವೀಸೃಷ್ಟಿಯಲಿ ? ।
ವೇರ್ತ್ತವೇನಲ್ಲ ರುಚಿರೂಪನಾನಾತ್ವ ॥
ವ್ಯಕ್ತಿಗುಣ ವೈವಿಧ್ಯವಿರದಂದು ಲೋಕದಲಿ ।
ರಿಕ್ತವಾಗದೆ ಬಾಳು ?—ಮರುಳ ಮುನಿಯ ॥ ೪೪೯

ಸೃಷ್ಟಿಯಲಿ ಜಾತಿಗಳು ಜಾತಿಯೊಳ್ ವ್ಯಕ್ತಿಗಳು ।
ವ್ಯಷ್ಟಿಯೊಳಗಂಗಂಗಳಂತು ಭೇದಗಳು ॥
ಸ್ಪಷ್ಟತ್ರಿವಿಧಗಳಲಿ ನೀನದನು ತೊರೆದಂದು ।
ಶಿಷ್ಟವಿರ್ಪುದು ತತ್ತ್ವ—ಮರುಳ ಮುನಿಯ ॥ ೪೫೦

ಪ್ರತ್ಯೇಕದ ವ್ಯಕ್ತಿ ಲೋಕಸಂಸರ್ಗದಲಿ ।
ಬತ್ತೆ ಸ್ವಭಾವಜವನಿತರ ವ್ಯಕ್ತಿಗಳೊಳ್ ॥
ಮತ್ತೊಂದು ಪ್ರತ್ಯೇಕದ ವ್ಯಕ್ತಿಯಂತು ಜಗ ।
ಪ್ರತ್ಯೇಕಗಳ ಜಡೆಯೊ—ಮರುಳ ಮುನಿಯ ॥ ೪೫೧

ಹುಳುವ ಮೇಲುಸಿರೂದು ಮುದುರಿಕೊಳ್ಳುವುದೊಡನೆ ।
ಒಳಕೀಲಿನೆಸಕವದು ಸೃಷ್ಟಿ ಸತ್ತ್ವವದು ॥
ಮಳೆ ಬಿಸಿಲು ಹೊರಗೆ ಎಲಿವಿಲಿ ಮಿಡಿತ ತನುವೊಳಗೆ ।
ಕಲೆಯ ರಚನೆಯೊ ಜಂತು—ಮರುಳ ಮುನಿಯ ॥ ೪೫೨

## ವ್ಯಷ್ಟಿಮೌಲ್ಯವ ಮರೆಯದಿರ್

ವ್ಯಷ್ಟಿಮೌಲ್ಯವ ಮರೆಯದಿರ್ಪ ರಾಷ್ಟ್ರಸಮಷ್ಟಿ ।
ರಾಷ್ಟ್ರಋಣವನು ಮರೆಯದಾ ಪ್ರಜಾ ವ್ಯಷ್ಟಿ ॥
ನಷ್ಟಬರೆ ಶಿಷ್ಟಿ ಲಾಭವದೆಂಬ ಸಮದೃಷ್ಟಿ ।
ತುಷ್ಟಿಕರವೋ ಜಗಕೆ—ಮರುಳ ಮುನಿಯ ॥ ೪೫೩

ಒರುವವನುಮಣಿಸುವಳು ಪೋಲು ಮಾಡಳ್ ಪ್ರಕೃತಿ ।
ಕುರುಡೆರಕವವಳೆಸಕವಲ್ಲ ಮರೆಯದವಳ್ ॥
ಇರಿಸಿರ್ಪಳೋರೋರ್ವನೊಳುವವನು ತನ್ನ ತಾಂ ।
ಪೊರೆದುಕೊಳೆ ಕೀಲೊಂದೆ—ಮರುಳ ಮುನಿಯ ॥ ೪೫೪

ಎರಕದಚ್ಚಿನ ಯಂತ್ರದಿಂದ ಗಣನೆಯ ಮೀರಿ ।
ಸರಕಮಾಳ್ಪ ಪ್ರಕೃತಿಗೊಂದು ಪುರುಳೇನು ? ॥
ನರಕುಲದೊಳವಳದೊರ್ವನ ಬೆಲೆಯು ಲೆಕ್ಕಿಪಳೆ ? ।
ಒರುವನೇನೆನ್ನುವೆಯೊ ?—ಮರುಳ ಮುನಿಯ ॥ ೪೫೫

ವ್ಯಷ್ಟಿಗೆಡೆಬಿಡಿಸದ ಸಮಷ್ಟಿಯೇಂ ಬೆಳೆದೀತು ? ।
ಸೃಷ್ಟಿಯೊಂದೊಂದು ಜೀವಕವೊಂದು ಬೆಲೆಯುನ್ ॥
ಇಟ್ಟಿಹಳದನು ರಾಷ್ಟ್ರದೊಟ್ಟು ಮರೆತೆಣಿಸದಿರೆ ।
ನಷ್ಟವಷ್ಟಕಮಲ್ತೆ ?—ಮರುಳ ಮುನಿಯ ॥ ೪೫೬

ಎತ್ತೆತ್ತಲಿನ ಜವುಗೊ ಎಷ್ಟು ನೆಲದೂಟೆಗಳೊ ।
ಬೆಟ್ಟಕಾಡುಗಳೊರತೆ ಹಳ್ಳ ಹರಿತಗಳೋ ॥
ಎಷ್ಟೂರ ರೊಚ್ಚುಗಳೊ ಕೂಡಿ ನದಿಯಪ್ಪಂತೆ ।
ವ್ಯಕ್ತಿಬಲ ಮೂಲವೆಲೊ—ಮರುಳ ಮುನಿಯ ॥ ೪೫೭

ಅಷ್ಟವಕ್ರಂಗೆ ಕೃಷ್ಣಂಗಿರ್ದವೊಲೆ ದೇಹ ।
ಸೊಟ್ಟುತನ ಬಿಟ್ಟಿಲ್ಲ ಸಾಮ್ಯವಿರ್ವರಿಗಂ ॥
ದೃಷ್ಟಿಸಿದರೇಂ ಗೋಪಿಯರ್ ಮುನಿಯು ಲೋಕದಲಿ ।
ವ್ಯಷ್ಟಿಗುಣದಿನೆ ಗಣನೆ—ಮರುಳ ಮುನಿಯ ॥ ೪೫೮

ನೂಲೆಳೆಯ ಹಾಸುಹೊಕ್ಕುಗಳಿಂದ ನಲ್‌ಶಾಲೆ ।
ಶಾಲೆಯೇನಾದೀತು ನೂಲ ನೀಂ ಪರಿಯೆ ॥
ಬಾಳೊಂದದೇನು ನಾಡೇಳ್ಗೆಗೆಂದೆನ್ನದಿರು ।
ಆಳು ಚೆನ್ನಿರೆ ನಾಡು—ಮರುಳ ಮುನಿಯ ॥ ೪೫೯

ವ್ಯಕ್ತಿಕಾಂತಿಯೆ ಜಗತ್ಸೃಷ್ಟಿ ನಿಟಿಲದ ತಿಲಕ ।
ಸಕ್ತಿಯದರಿನೆ ವಿಷಯಗಳಲಿ ಮನುಜಂಗೆ ॥
ರಿಕ್ತ ಜೀವನವಲ್ತೆ ನಿರ್ವ್ಯಕ್ತಿಯಾಗೆ ಜಗ ? ।
ವ್ಯಕ್ತಿತೆ ಪವಿತ್ರವೆಲೊ—ಮರುಳ ಮುನಿಯ ॥ ೪೬೦

ಬಾಳಿಗೊನೆಯೊಂದರಿನಿವಣ್ಣ ನೂರರೊಳೆಲ್ಲೊ ।
ಮೇಳಿಸಿಹನೊಂದರೊಳು ಸುಧೆಯನಜನೆಂಬರ್ ॥
ಆಳೆನಿಬರಿರ್ದೊಡೇಂ ವ್ಯಕ್ತಿಬಲದಿಂ ನಾಡಿ- ।
ನೇಳಿಗೆಯು ನಿಶ್ಚಿತವೊ—ಮರುಳ ಮುನಿಯ ॥ ೪೬೧

## ಮಾಯೆ ಸುಳಿದಾಡುವಳು

ತಾಯೊಲುಮೆ ಕಣ್ಣಾಗಿ ತಂದೆಯೊಳ್ನುಡಿಯಾಗಿ ।
ಪ್ರೇಯಸಿಯ ನಗುವಾಗಿ ಸುತ ಮಮತೆಯಾಗಿ ॥
ಗಾಯನ ಕಲಾ ಕಾವ್ಯ ಶಾಸ್ತ್ರಾಭಿರುಚಿಯಹಾಗಿ ।
ಮಾಯೆ ಸುಳಿದಾಡುವಳೊ—ಮರುಳ ಮುನಿಯ ॥ ೪೬೨

ಪ್ರೇಮಿ ಸತಿ ಸುತರಿಷ್ಟಧನ ಮನೆ ಜಸಂಗಳಿಂ ।
ರಾಮಣೀಯಕವೆನಿಸಿ ಜೀವನವನೆಲ್ಲ ॥
ಮೈಮರೆಸಿ ಮನವೊಲಿಸಿ ಕೊರಳಕೊಯ್ವಳು ಮಾಯೆ ।
ನೇಮವನು ಮರೆಯದಿರು—ಮರುಳ ಮುನಿಯ ॥ ೪೬೩

ಆಯವರಿವವರಾರು ಸೃಷ್ಟಿಯುಡುಗೆಯನಳೆದು ? ।
ಮೇಯವಾಯ್ತೇನಂದು ದ್ರೌಪದಿಯ ದುಕೂಲಂ ? ॥
ಒಯ್ಯರದ ಸೆರಗನೊಂದೊಂದನೊಂದೊಂದು ಚಣ ।
ಮಾಯೆ ಬೀಸುತ್ತಿಹಳೊ—ಮರುಳ ಮುನಿಯ ॥ ೪೬೪

ತಾಯಹಾಗಿ ಮಗುವಾಗಿ ತಂದೆ ಸೋದರರಾಗಿ ।
ಪ್ರೇಯಸಿಯುಮಾಗಿ ಕೆಳೆಯಹಾಗಿ ಪಗೆಯಹಾಗಿ ॥
ಹೇಯದಾ ಧ್ಯೇಯದಾ ಬಾಂಧವ್ಯ ಕೋಟಿಯಲಿ ।
ಮಾಯೆ ಪಿಡಿವಳು ನಿನ್ನ—ಮರುಳ ಮುನಿಯ ॥ ೪೬೫

ಮೈಯ ಕೊಬ್ಬಿಸಿ ಬೆಳಸಿ ಬಳಿಕೊಂದು ದಿನ ಕುರಿಯ ।
ಆಯುದಿಂ ತಲೆಕಡಿದು ಮಾರ್ವ ಕಟುಕನವೋಲ್ ॥
ಮಾಯೆ ನಿನ್ನನು ಸಲಹಿ ನಲವಿಟ್ಟದೊಂದು ದಿನ ।
ಹೇಯಕಳೆವಳು ನಿನ್ನ—ಮರುಳ ಮುನಿಯ ॥ ೪೬೬

ಪೇಯ ದುಷ್ಪೇಯಗಳ ಮಿಶ್ರಣವೊ ಸೃಷ್ಟಿರಸ ।
ಜ್ಞೇಯ ದುರ್ಜ್ಞೇಯಗಳ ಮಿಶ್ರ ಸೃಷ್ಟಿಕೃತಿ ॥
ಪ್ರೇಯದಿಂ ಕೆಣಕುತ ಪ್ರೇಯದಿಂ ಕಾಡುವುದು ।
ಮಾಯೆಯ ವಿಲಾಸ ಕಲೆ—ಮರುಳ ಮುನಿಯ ॥ ೪೬೭

ಧೀಯ ಸೆಣಸಲಿಕಿರ್ಪುದಾತ್ಮನಿಶ್ಚಯಕಿರದು ।
ಮೇಯತೆಯ ಭಾಸವೀ ಜಗದ ತನುಗಳಲಿ ॥
ಕಾಯದಾರ್ಢ್ಯವ ತೋರಿ ವಾಯುವನು ತಬ್ಬಿಪುದು ।
ಮಾಯೆಯ ವಿಲಾಸವೆಲೊ—ಮರುಳ ಮುನಿಯ ॥ ೪೬೮

ಬಾಯನೂರಿಸಲಿಹುದು ಕರುಳ ತಣಿಸಲಿಕಿರದು ।
ಪಾಯಸದ ರುಚಿ ಜಗದ ಪಾಕಪಾತ್ರೆಯಲಿ ॥
ಕೈಯನೆಳೆದಪ್ಪಿ ಕಾಲಿಂ ಸಗಣಿಯೊತ್ತಿಪುದು ।
ಮಾಯೆಯ ವಿಲಾಸವೆಲೊ—ಮರುಳ ಮುನಿಯ ॥ ೪೬೯

ಮೊಗಮೊಗದ ಕದಪಿಂದೆ ಕಣ್ಣಿಂದೆ ತುಟಿಯಿಂದೆ ।
ಬಗೆಬಗೆಯುಂ ನುಡಿನುಡಿದು ಕೇಳ್ವರೆದೆಯಿರಿದು ॥
ಜಗವ ಕುಲುಕಾಡಿಸುತೆ ಕಾಡಿಸುತೆ ಕಿರಿಚಿಸುತೆ ।
ನಗುತಲಿರುವಳು ಮಾಯೆ—ಮರುಳ ಮುನಿಯ ॥ ೪೭೦

ಕಾಯ ಸಂಪತ್ಪ್ರಗತಿ ಸಾಗಿ ಮುಂಬರಿದಂತೆ ।
ಪ್ರೇಯೋಪಭೋಗ ಸಾಮಗ್ರಿ ಬೆಳೆದಂತೆ ॥
ಮಾಯೆಯಶಾನಾಯವನು ಬಿತ್ತರಿಸಿ ಲೋಗರನು- ।
ಪಾಯದಿಂ ಹಿಡಿಯುವಳು—ಮರುಳ ಮುನಿಯ ॥ ೪೭೧

## ಗೆಲ್ಲು ಮಾಯೆಯನು

ಮಾಯಶಾತ್ಮಯಿತೆಯಲ್ತೆ ಪುರುಷಸಿದ್ಧಿಯ ಶಿಖರ ।
ನ್ಯಾಯವಕ್ಕುಂ ಜ್ಞಾನರಾಸಿಕ್ಯವದಕೆ ॥
ಪ್ರೇಯಸಿಯೊಳಿನಿತೊಲಿದು ಮತ್ತಿನಿತ್ತಾಳ್ವವೊಲು ।
ಮಾಯೆಯನು ಗೆಲುವುದೆಲೊ—ಮರುಳ ಮುನಿಯ ॥ ೪೭೨

ಕಾರಾಗೃಹದ ಬಂದಿ ರಾಜಭಟ ಭಯದಿಂದ- ।
ಲಾರಾಮದೊಳಿಗದಿ ದುಡಿವಂತೆ ಲೋಗರ್ ॥
ಚಾರರಪ್ಪರ್ ಜಗದ್ವನದಿ ಮಾಯಾವಶದೆ ।
ಧೀರರ್ ಸ್ವತಂತ್ರದಿಂ—ಮರುಳ ಮುನಿಯ ॥ ೪೭೩

ಆರನುಂ ಬಿಡದ ಧರ್ಮಂ ಜಗದ್ರಥಸೇವೆ ।
ಧೀರನೆಳೆವಂ ಬ್ರಹ್ಮಲೀಲೆಯೆಂದದನು ॥
ತೀರು ನಿಜ ಭೋಗ್ಯ ಸಂಸಾರವೆಂಬ ಭ್ರಮೆಗೆ ।
ಮಾರುವೋದಂ ಮೂಢ—ಮರುಳ ಮುನಿಯ ॥ ೪೭೪

ಯುವತಿ ನವ ಹಾವಭಾವಗಳಿಂದನುಕ್ಷಣಂ ।
ನವತೆಯಾನುತಿರೆ ಯುವಕಂ ಬೆರಗುವಡುವೊಲ್ ॥
ವಿವಿಧವೇಷದಿ ನವ್ಯತೆಯನಾನುತಿರೆ ಮಾಯೆ ।
ಶಿವನು ಸುಖತನ್ಮಯನೊ—ಮರುಳ ಮುನಿಯ ॥ ೪೭೫

ಮಾಯೆ ಮಾಯೆಯಿಂದೆಂದು ಹಳಿದೊಡಾಗುವುದೇನು ? ।
ಕಾಯವಿರುವನಕ ಸಂಸಾರಬಿಡದಿಹುದು ॥
ಲಾಯದೊಳಗಿರುವಂದು ಬಯಲ ಮರೆಯದ ಕುದುರೆ- ।
ಗಾಯಾಸ ಭಯ ಹಗುರ—ಮರುಳ ಮುನಿಯ ॥ ೪೭೬

ಮೇಯಪ್ರಪಂಚದೊಳಮೇಯ ಶಕ್ತಿಗಳಾಟ ।
ಜ್ಞೇಯಗಳ ನಡುನಡುವೆ ದುರ್ಜ್ಞೇಯ ಗೂಢ ॥
ಕಾಯದಳತೆಯ ಕೋಲು ಮನವನೆಂತಳೆದೀತು ? ।
ಮಾಯೆಯಾಟ ಜಗತ್ತು—ಮರುಳ ಮುನಿಯ ॥ ೪೭೭

ಮಂಕುತಿಮ್ಮನದಾರು ? ಅವನಲ್ಲದವನಾರು ? ।
ಡೊಂಕುಬಾಲವೆ ಕುಲಧ್ವಜವಲ್ತೆ ನಮಗೆ ? ॥
ಮಂಗಮನ ಮಂಜುಕಣ್ ನನಗೆ ನಿನಗೆಲ್ಲರಿಗೆ ।
ಸಂಕೋಚ ನಮಗೇಕೊ ?—ಮರುಳ ಮುನಿಯ ॥ ೪೭೮

ಪರತತ್ತ್ವ ಸಿಂಧುವೊಳು ಚರಜೀವ ಬಿಂದುವನು- ।
ಮೆರಡು ಬೇರೆನಿಪವೊಲು ಮಾಡಿಹಳು ಮಾಯೆ ॥
ಸರಸದಾಟವೊ ಮಾಯೆ ಪರಸತ್ತ್ವಕದು ಲೀಲೆ ।
ಪರಿಪರಿಯ ವೇಷವದು—ಮರುಳ ಮುನಿಯ ॥ ೪೭೯

ಪ್ರಾಪಂಚಿಕ ಪ್ರಗತಿ ಭೇಕಪ್ಲುತ ಪ್ರತತಿ।
ಪಾಪಮೋಚನಕೆಂದು ತಪಸಿ ಮೇನಕೆಯಹಾ-॥
ರೂಪಕ್ಕೆ ಸೆರೆಬಿದ್ದ ಕೌಶಿಕನ ಚರಿತೆಯದು।
ಶಾಪವದು ಮಧುಲೇಪ—ಮರುಳ ಮುನಿಯ॥ ೪೪೦

## ಭ್ರಮೆಯು ನೂಕಲರಿತವನೆ ಕೃತಿ

ಏಕವೇ ಸದ್ವಸ್ತುವಾಯೇಕದಾ ಪ್ರಭೆಯೆ।
ಲೋಕಮಾಯಾಚಿತ್ರವದೆ ಜೀವಮೂಲ॥
ಸಾಕಲ್ಯದೃಷ್ಟಿಯಿಂ ನಾನಾತ್ವದ ಭ್ರಮೆಯ।
ನೂಕಲರಿತವನೆ ಕೃತಿ—ಮರುಳ ಮುನಿಯ॥ ೪೪೧

ಸಾಕೂತಮರೆಸಿ ಜಾನಿಸುತಿರ್ಪವಂ ಭಕ್ತ।
ಮೂಕನಂತಿಹನಾಂತು ತೃಪ್ತಿಯಿಂ ಜ್ಞಾನಿ॥
ಬೇಕೆನ್ನುವಂ ದ್ವೈತಿ ಬಂತೆನುವನದ್ವೈತಿ।
ಏಕವಿರ್ವರೆ ಲಕ್ಷ್ಯ—ಮರುಳ ಮುನಿಯ॥ ೪೪೨

ಹಳೆಯ ತೋಟದಲಿ ಹೊಸ ಚಿಗುರೊಡೆಯೆ ಸೌಂದರ್ಯ।
ಒಳಕೆ ಮೊಗದಲಿ ತೋರ್ಪ ಹೊಸ ನಗುವೆ ಸೊಗಸು॥
ತಿಳಿದುದರ ನಡುವೆ ಹೊಸ ಮೆರುಗೊಂದೆಸೆಯೆ ಕುತುಕ।
ಹಳತು ಹೊಸತೊಂದು ರುಚಿ—ಮರುಳ ಮುನಿಯ॥ ೪೪೩

ಏಕದೊಳನೇಕವನ್ ಅನೇಕದೊಳಗೇಕವನ್।
ಸ್ವೀಕರಿಸಿ ತಾನದರೊಳೊಂದೊಂದುಮೆರೆದು॥
ಸಾಕಲ್ಯದಿಂದೆಲ್ಲ ನೋಡುವಾತ್ಮಜ್ಞಂಗೆ।
ಶೋಕ ವೈರಗಳೆಲ್ಲಿ?—ಮರುಳ ಮುನಿಯ॥ ೪೪೪

ಸ್ಮರಣೆಗೊದಗುವ ಪೂರ್ವಪರಿಚಿತಿಯ ಚಿಹ್ನಮಂ ।
ಬೆರಗುಗೊಳಿಸುವ ನವ್ಯಭಾವ ವರ್ಣಗಳುಂ ॥
ಬೆರತೇಕವಾಗಿ ಮಾನವ ಪಿಡಿಯೆ ಸೌಂದರ್ಯ ।
ಪರಿಮಾಣಯುಕ್ತಿಯದು—ಮರುಳ ಮುನಿಯ ॥ ೪೮೫

ಬೇವು ಬೆಲ್ಲಗಳುಂಡೆ ದಿನದಿನದ ನಮ್ಮೂಟ ।
ಪೂರ್ವಕರ್ಮದ ಫಲಿತಶೇಷದಿಂದ ಕಹಿ ॥
ದೈವ ಪ್ರಸಾದದಿಂದ ಸಿಹಿಯೀ ದ್ವಂದ್ವದಲಿ ।
ಆವೇಶವೇತಕೋ—ಮರುಳ ಮುನಿಯ ॥ ೪೮೬

## ನಾಟ್ಯವಿಧಿ ನಟಿಯಿಚ್ಛೆ

ನಟರಾಜನಂಗಾಂಗವಲುಗಿ ಬಳುಕಲು ವಿಶ್ವ-।
ಘಟದಿ ರಸ ಕುಲುಕುವುದು ಜೀವ ಚಲಿಸುವುದು ॥
ಚಟುಲ ತಾಂಡವ ತಾಳಲಯವೆ ಸೃಷ್ಟಿಪ್ರಳಯ ।
ನಟಿಯಿಚ್ಛೆ ನಾಟ್ಯವಿಧಿ—ಮರುಳ ಮುನಿಯ ॥ ೪೮೭

ಮೃತ್ಯುಂಜಯನುಮುಮೆಯುಮೀ ವಿಶ್ವರಂಗದಲಿ ।
ಸತ್ಯಸೌಂದರ್ಯಂಗಳಾಗಿ ರಾಜಿಸುತೆ ॥
ನೃತ್ಯವಾಡುವರು ಜೀವಾತ್ಮ ಮಾಯೆಗಳಾಗಿ ।
ನಿತ್ಯದ ವಿಲಾಸವದು—ಮರುಳ ಮುನಿಯ ॥ ೪೮೮

ಕಾಂತಿಗಳ ಬೀಸಿ ಸಂಭ್ರಾಂತಿಗಳನಾಗಿಸುತ ।
ಅಂತರಂಗದೆ ಶಾಂತಿಗಂತಕಳು ಮಾಯೆ ॥
ಸ್ವಾಂತಲಾಭದ ಚಿಂತೆಯಿಲ್ಲದೆಡೆಯವಳಾಟ-।
ಕಂತಿಮವೊ ನಿರ್ಮಾಯ—ಮರುಳ ಮುನಿಯ ॥ ೪೮೯

ದೈವಪ್ರಸಾದವಾಕಸ್ಮಿಕದೆ ಬಾಗಿನವೆ ? ।
ಧೀವಿಕಲನರುಳುಮರುಳಿನ ಕೈಯ ವರವೆ ? ॥
ಜೀವಕರಣಂಗಳೈಕಾಗ್ರ್ಯದ ತಪೋರೂಪ ।
ಭಾವಕೃಷಿಗದು ಫಲಿತ—ಮರುಳ ಮುನಿಯ ॥ ೪೯೦

ಮೊಟ್ಟೆಗಳನಿಟ್ಟದನು ತಾನೆ ನುಂಗುವುದಹಿಯುಂ ।
ಸೃಷ್ಟಿತಾಯಿಗಮುಣಿಸು ತಾಂಪೆತ್ತ ಮಗುವು ॥
ಪೆಟ್ಟನಿಂ ಬೆನ್ಮುರಿವವೊಲು ನಿನ್ನ ಮೈದಡವಿ ।
ತಟ್ಟಿಯುಂ ಸವೆಯಿಪಳು—ಮರುಳ ಮುನಿಯ ॥ ೪೯೧

## ಬಾಹ್ಯದಲಿ ತಿರುಳಿಲ್ಲ

ಸಿಂಗರಕೆ ಮುಂಗುರುಳು ಮುಸಿನಗುವು ಓಸುಕಾಕು ।
ಕೆಂಗಣ್ಣು ಹುರಿಮೀಸೆ ಬಿರುಬು ಬೀರಕ್ಕೆ ॥
ಹೆಂಗರುಳು ಮರುಕ ಮೊರೆ ಬೆರಗುನುಡಿ (ಕರುಣಕ್ಕೆ) ।
ಮಂಗಾಟವೀಶಂಗೆ—ಮರುಳ ಮುನಿಯ ॥ ೪೯೨

ಸಂಗ ನಿಸ್ಸಂಗಾದಿ ನಿಯಮ ವ್ರತಾಚಾರ ।
ಅಂಗಾರ ತಿರುನಾಮ (ಕಾಷಾಯ) ಬೂದಿ ॥
ಅಂಗಾಂಗ ಭಾವರಸ ಚಿಹ್ನೆ ಚೇಷ್ಟೆಗಳೆಲ್ಲ ।
ಮಂಗಾಟವೀಶಂಗೆ—ಮರುಳ ಮುನಿಯ ॥ ೪೯೩

ವಾನರನ ಲಾಂಗೂಲವೆರಡಾದೊಡದರಿನವ-।
ನಾನನದ ಚೇಷ್ಟೆಯೇನರೆಯೊ ಇಮ್ಮಡಿಯೋ ॥
ಮಾನವನೊಳಾತ್ಮ ಬಲಿಯದೆ ಬಾಹ್ಯವೈಭವಗ ।
ಳೇನಾದೊಡೇಂ ಲಾಭ—ಮರುಳ ಮುನಿಯ ॥ ೪೯೪

ಲೋಕವನು ತಿದ್ದಲಿಕೆ ಹೊರಟು ಗೆದ್ದವರಾರು ? ।
ಕಾಕುತ್ಸ್ಥನೇ ಕೃಷ್ಣನೇ ಬುದ್ಧ ಜಿನರೆ ॥
ಸಾಕ್ರೆಟೀಸ್ ಏಸರೇ ಮೋಸೆಸ್ ಮಹಮ್ಮದರೆ ।
ಸ್ವೀಕರಿಸಿತಾರನದು ?—ಮರುಳ ಮುನಿಯ ॥ ೪೯೫

ಗುಡಿಯ ಕಟ್ಟುವನಿತ್ತು ಭಕ್ತಿಯಿರದೊಡೆ ಬೇಡ ।
ಗುಡಿಯನೊಡೆಯುವನಿತ್ತು ಸತ್ಯಾಸ್ಥೆಯಿಹುದೇಂ ? ॥
ದೃಢ ನಿಶ್ಚಯಂವನರಸದಿರ್ಪುದಾಸೀನತೆಯಿ-।
ನುಡುಂಗಿ ನಶಿಸುವುದಾತ್ಮ—ಮರುಳ ಮುನಿಯ ॥ ೪೯೬

## ಮಿಥ್ಯೆ ಸತ್ಯದ ಹೊದಕೆ

ಮರ್ತ್ಯಾಂಗರೂಪದೊಳಮರ್ತ್ಯಾಂಶದವತಾರ ।
ದೈತ್ಯ ವಾಸನೆಗಳೊಡನಮರ ಸುಮಸುರಭಿ ॥
ವ್ಯತ್ಯಯಶಾಭಾಸಂಗಳುದರದೊಳು ಪರಸತ್ಯ ।
ಮಿಥ್ಯೆ ಸತ್ಯದ ಹೊದಕೆ—ಮರುಳ ಮುನಿಯ ॥ ೪೯೭

ಅನ್ನಕೋಶಕ್ಕೆ ನೆರೆ ಮಲಕೋಶ ದೇಹದಲಿ ।
ಪುಣ್ಯಗಂಧಕೆ ಪಾಪಗಂಧ ನೆರೆ ಮನದಿ ॥
ಮಣ್ಣುಮುಂಡುಗೋಲ ಪುಡಿಯುಂ ಬೆರೆತು ನರರಚನೆ ।
ನಿನ್ನೆಚ್ಚರದೆ ಶುದ್ಧಿ—ಮರುಳ ಮುನಿಯ ॥ ೪೯೮

ನೀರು ಮೂರ್ ಬಾನಿಂದ ಮಳೆ ನೆಲದಿನೂಟೆ ಇವು ।
ಸೇರಿ ಕೆರೆ ಹಳೆಯುಳಿಕೆ ಊರಿಗುಪಯೋಗ ॥
ಮೂರುಣಿಸು ನಿನಗಂ ನಿಜಾರ್ಜಿತಂ ಸೃಷ್ಟ್ಯಂಶ ।
ಪ್ರಾರಬ್ಧವೀ ತ್ರಿತಯ—ಮರುಳ ಮುನಿಯ ॥ ೪೯೯

ಹುಲ್ಲು ಬಯಲೊಳು ನೀನು ಹೂವುಗಳ ಹುಡುಕುತ್ತ ।
ತಲ್ಲಣದ ನಡುವೆ ನೀಂ ತಾಳ್ಮೆದಾಳುತ್ತ ॥
ಕಲ್ಲುಗಳ ನಡುವೆ ನೀಂ ರನ್ನಗಳನರಸುತ್ತ ।
ಬೆಲ್ಲವಿರು ಕಹಿಗಳೊಳು—ಮರುಳ ಮುನಿಯ ॥ ೫೦೦

ಶರಣು ಶರಣೆರುವುದಕೆ ಸತ್ಯಕ್ಕೆ ತತ್ತ್ವಕ್ಕೆ ।
ಹರಡಿಹುದದೆತ್ತಲೆತ್ತಲುಮೆಂದದೆಂದೂ ॥
ಇರದುದರ ಮಾತೇಕೆ ಸುಳ್ಳು ಶೂನ್ಯಕೆ ಬುರುಡೆ ।
ಇರುವುದೇ ಮೊದಲಿಳೆಗೆ—ಮರುಳ ಮುನಿಯ ॥ ೫೦೧

ನರಲೋಕವೇನಸುರವೆನಿಪ ಜಗದಿಂ ಘೋರ ।
ಮರಣವೇಂ ಜನದಿಂದ ಜನಕೆ ಉಪಕಾರ ॥
ಪರಮಾತ್ಮಚಿಂತೆಯೆತ್ತಾತ್ಮಸಂಯಮವೆತ್ತ ।
ನರಕಮಾರ್ಗಿಯೊ ಲೋಕ—ಮರುಳ ಮುನಿಯ ॥ ೫೦೨

ಲ್ಯುಕ್ರೀಟಿಯುಸ್ಸಿನಾ ಪ್ರಕೃತಿಪ್ರಲಯವಾದ ।
ನ್ಯಕ್ಕೃತಾಕ್ಷಿಯವಾದ ವಿಸ್ಮೃತಾತ್ಮನದು ॥
ಸ್ವೀಕೃತಾಮುತಾರ್ಯಾತ್ಮಪಾರಮ್ಯ ದೃಗ್ವಾದ ।
ಸಾಕ್ರೆಟೀಸನವಾದ—ಮರುಳ ಮುನಿಯ ॥ ೫೦೩

## ವಿಧಿವಿಲಾಸ

ಬದುಕೆಂಬ ಹೆಸರಿನಲಿ ನೀಂ ಜಗವ ಜಗ ನಿನ್ನ ।
ಕುದಿಸುತ್ತ ಕೆದಕುತ್ತ ಕುಲುಕುತಿರುವಂದು ॥
ಬದಲಾಗದೆಂತು ನೀಮಿರ್ಪ್ಪದೀ ನಿಮ್ಮಾಟ ।
ವಿಧಿಯ ನಿತ್ಯವಿಲಾಸ—ಮರುಳ ಮುನಿಯ ॥ ೫೦೪

ಇಷ್ಟಗಳನೊಡೆಯಿಸುವುದು ಕಷ್ಟಗಳ ನೀಡುವುದು ।
ದುಷ್ಟಸಾಸದೆ ಶಿಷ್ಟತನವ ಪರಿಕಿಪುದು ॥
ಎಷ್ಟು ನೀಂ ಸೈಸಲಹುದೆನ್ನುವನು ವಿಧಿರಾಯ ।
ಶಿಷ್ಟ ಶೋಧಕನವನು—ಮರುಳ ಮುನಿಯ ॥ ೫೦೫

ಆವುದೋ ಒಂದಿಹುದು ವಸ್ತುವೋ ಸತ್ತ್ವವೋ ।
ಭಾವ ಮಹಿಮೆಯೊ ಗುಣವೊ ತೇಜವೋ ಏನೋ ॥
ಕಾವುದೆಲ್ಲವನು ತಾಂ ತೀವಿ ಮರೆಯಾಗಿಹುದು ।
ದೈವವೆಂದದನು ಕರೆ—ಮರುಳ ಮುನಿಯ ॥ ೫೦೬

ಜನಿಯೆಂದು ಮೃತಿಯೆಂದು ರತಿಯೆಂದು ವ್ರತಮೆಂದು ।
ದಿನದಿನಕದೊಂದೊಂದು ಕಾರಣವನಿಟ್ಟು ॥
ಋಣದಾನವಿಕ್ರಯಂದ ವ್ಯಾಪಾರ (ವ್ಯವಹಾರ) ।
ಬಿನದವಿದು ದೇವಂಗೆ—ಮರುಳ ಮುನಿಯ ॥ ೫೦೭

ಮೇಳೈಸುವವೆಲ್ಲ ವೈರ ಬ್ರಹ್ಮಾಬ್ಧಿಯಲಿ ।
ಸಾಳೀಕ ಸತ್ಯ ಜೀವಿತ ಮೃತ್ಯುವೆರಡುಂ ॥
ಕಾಲೋಚಿತ ವ್ಯಕ್ತಲೀನರಾಗುವರೆಲ್ಲ ।
ಲೀಲೆಯೆನಲಿನ್ನೇನು ?—ಮರುಳ ಮುನಿಯ ॥ ೫೦೮

ಎನಿತ ಜಗಕಿತ್ತೆ ನೀಂ ಕೊಂಡೆಯೆನಿತದರಿಂದ ।
ಗಣಿತವದೆ ನಿನ್ನ ಯೋಗ್ಯತೆಗೆ ನೆನೆದದನು ॥
ಉಣು ಬೆಮರಿ, ನಗು ನೊಂದು, ನಡೆ ಕುಂಟುತಲುಮೆಂದು ।
ಹಣೆಯ ಬರಹವೊ ನಿನಗೆ—ಮರುಳ ಮುನಿಯ ॥ ೫೦೯

ಚಕ್ರದಕ್ಷಂ ಸವೆದು ನಾಭಿಬಂಧಂ ಸಡಲಿ ।
ವಕ್ರವಾಗದೆ ಭುವನ ಗೋಲಗಳ ಯಾನಂ ॥
ಶಕ್ರಧನು ಸೂರ್ಯೋಪರಾಗ ಭೂಕಂಪಿತಗ-।
ಳಾಕ್ರೀಡೆಗೇಂ ನಿಯತಿ ?—ಮರುಳ ಮುನಿಯ ॥ ೫೧೦

ಅರಿಯರಾರು ಮಿತ್ರನಾರ್ ಪ್ರಕೃತಿಕರವೆರಡರಲಿ ।
ಇರವೀವುದೊಂದಿರಲು ತೆರಪೀವುದೊಂದು ॥
ಪರಿವೃತ್ತಕಂದುಕಾಕ್ರೀಡೆ ವಿಧಿಯುಮರೊಳಗೆ ।
ಬರಿಯ ಕಂದುಕ ನಾವು—ಮರುಳ ಮುನಿಯ ॥ ೫೧೧

ತ್ರಿಜಟೆಯೋ ವಿಧಿಯುದನದೃಷ್ಟವೆನ್ನುವುದು ಜನ ।
ನಿಜಕರ್ಮ ಕಶೆಯೊಂದು ಜಗದ ಕಶೆಯೊಂದು ॥
ಅಜಗೂಢಕಶೆಯೊಂದು ಮೂರಿಂತಮರೆ ನಿನ್ನ ।
ವಿಜಿಗೀಷುತೆಯ ಮೆರಸೊ—ಮರುಳ ಮುನಿಯ ॥ ೫೧೨

## ಲಭ್ಯವಿದ್ದಷ್ಟು ಪ್ರಾಪ್ತಿ

ಹಬ್ಬ ದಿಬ್ಬಣ ಪಥ್ಯತಿಥಿಗಳೆಂಜಲು ಸೇರೆ ।
ಬೊಬ್ಬಿಟ್ಟು ಕಾದುವುವು ಹದಿನೆಂಟು ನಾಯಿ ॥
ಒಬ್ಬಟ್ಟೊ ವಡೆಯೊ ತಂಗೂಳೊ ಬರಿ ಹೇಸಿಗೆಯೊ ।
ಲಭ್ಯವಾವುದಕೇನೊ—ಮರುಳ ಮುನಿಯ ॥ ೫೧೩

ಫಲವನಾನದೆ ನಿನ್ನ ಮನದೊಳುಳಿದಾಸೆಗಳು ।
ಕೊಳೆತ ಹೆಣದಂತೆ ನಾರುವುವು ಹೊರೆಯಾಗಿ ॥
ಎಳಸಿದುದನೀಯಲಾರದ ದೈವವೆಳಸಿಕೆಯ ।
ಮೊಳೆಯನಾನುಂ ಸುಡುಗೆ—ಮರುಳ ಮುನಿಯಂ ॥ ೫೧೪

ಆರಾಧನೆಯ ಫಲಂ ಪ್ರಾರಬ್ಧಮೊಡವೆರೆದು।
ಕಾರ ಸಿಹಿ ಕಹಿ ಹುಳಿಯ ಸೇರಿ ಕೂಟಕ್ಕಂ॥
ಸ್ವಾರಸ್ಯ ಕೆಟ್ಟಿತೆಂದಾಹಾರವನು ಬಿಡಲು।
ಬೇರದೇನಿಹುದೂಟ—ಮರುಳ ಮುನಿಯ॥ ೫೧೫

ಭೂತವೋ ಸತ್ತ್ವವೋ ಶಕ್ತಿಯೋ ತೇಜಮೋ।
ಜ್ಯೋತಿಯೋ ವ್ಯೋಮವೋ ಮನದ ಕಲ್ಪನೆಯೋ॥
ಪ್ರೀತಿಯೋ ವ್ಯೋಮವೋ ಮನದ ಕಾಂತಿಯೋ।
ನೀತಿಯೋ ಖ್ಯಾತಿಯೋ—ಮರುಳ ಮುನಿಯ॥ ೫೧೬

ಸೃಷ್ಟಿ ವೃಕ್ಷಾಂಕುರಂ ಸೌಂದರ್ಯಮದರಿಂದೆ।
ಪುಟ್ಟುವುವು ಜೀವನದ ಮೋಹದಾಹಗಳು॥
ಇಷ್ಟಕೃತಿಋಣಗಳಿಂ ಜನ್ಮಾಂತರದ ಸರಣಿ।
ಪುಷ್ಟಿ ಸೊಗಸಿಂ ಜಗಕೆ—ಮರುಳ ಮುನಿಯ॥ ೫೧೭

## ತೀರಿಸಲಾಗದ ಹೊಣೆ

ಋಣಗಳುಂಟೆನಿತೆನಿತೊ ಅನ್ನಋಣ ವಸ್ತ್ರಋಣ।
ಧನಋಣಗಳವನಿನಿತು ತೀರಿಸಲ್ಕಕ್ಕುಂ॥
ಋಣವೊಂದು ಬೇರಿಹುದು ತೀರಿಸಲ್ಕಸದಳವೊ।
ಹೆಣದ ಹೊರೆಯದು ಜಗಕೆ—ಮರುಳ ಮುನಿಯ॥ ೫೧೮

ಭುವಿಗೆ ಸಲಲಿರ್ಪ ಸಲಿಸಲ್ಕಾಗದನ್ನಋಣ।
ಜವರಾಯ ಬಿಟ್ಟಿಹ ಕಳೇಬರದ ಋಣವು॥
ಜವದಿನದನಗ್ನಿಗೊ ವಸುಂಧರೆಗೊ ಸೇರ್ಪಸಖ।
ಶವವಾಹಕನಿಗೆ ನಮೊ—ಮರುಳ ಮುನಿಯ॥ ೫೧೯

## ಮಿತಿಯಿರಲಿ

ಮಿತಿಯುಂಟು ಲೌಕಿಕದ ಕರ್ತವ್ಯಕೆಲ್ಲಕಂ ।
ಸತಿಸುತರ ದಾಯಕ್ಕೆ ದೇಶಕುಲಋಣಕೆ ॥
ಅತಿಧನಾರ್ಜನಯತ್ನವಾತ್ಮವನೆ ಹಿಸುಕೀತು ।
ಮಿತಿಯಿಂದ ಹಿತ ಲೋಕ—ಮರುಳ ಮುನಿಯ ॥ ೫೨೦

ಸ್ವೈರಪ್ರಕೃತಿಯಿನಪ್ಪ ಮಮತಾ ಪ್ರಲೋಭನ ।
ಪ್ರೇರಣೆಗಳಂ ನರಂ ಮೀರಿ ತನ್ನಾತ್ಮಂ ॥
ಸಾರನಿಧಿ ಮಿಕ್ಕೆಲ್ಲ ಜಗದಿಮೆನ್ನುತೆ ಬಾಳ್ವ ।
ವೈರಾಗ್ಯದಿನೆ ಶಾಂತಿ—ಮರುಳ ಮುನಿಯ ॥ ೫೨೧

ಲೋಕೇಶನೇಂ ನಿರಂಕುಶನವನ ರಾಜ್ಯದಲಿ ।
ಲೋಕಸಭೆಯೊಂದಿಲ್ಲ ದೂರಿಕೊಳೆ (ಕೊಳೆಯ) ॥
ಸಾಕು ನಮಗೀ ಹಳೆಯ ಸೊಟ್ಟುಸೊಟ್ಟಿನ ಸೃಷ್ಟಿ ।
ಬೇಕು ಪ್ರಜಾಸೃಷ್ಟಿ—ಮರುಳ ಮುನಿಯ ॥ ೫೨೨

ದೇವನಿಂಗೆಂದು ದುಡಿ ಯಾವಾತನಿಗಮಲ್ತು ।
ಜೀವ ಶೋಧನೆಗೆ ದುಡಿ ಭೂವಿಭವಕಲ್ತು ॥
ಈವನೆಲ್ಲರ್ಗ ವಿಕಾಶಂ ತಕ್ಕುದವರವರ್ಗೆ ।
ಆ ವರದಿ ತೃಪ್ತನಿರು—ಮರುಳ ಮುನಿಯ ॥ ೫೨೩

ನಾಳೆಯೊಂದಿಹುದು ನಿನ್ನೆಯುವೋಲೆ ಬಾಳಿನಲಿ ।
ಬೀಳಾಯ್ತು ನಿನ್ನೆಯುದು ಎಂದಳುವುದೇಕೆ ? ॥
ಮೇಲು ಮಾಡಲ್ಕಿಂದುಂ ಸಮಯವದ ಕಾಣೆಯೇಂ ? ।
ಪಾಳೊಂದುಮಿಲ್ಲವೆಲೊ—ಮರುಳ ಮುನಿಯ ॥ ೫೨೪

## ಲೋಕೋಪಕಾರ

ಪುರುಷಸಾಧ್ಯ ವಿವೇಕ ಸಿದ್ಧಿ ನಿರ್ಮಮತೆಯಿನೆ ।
ಪರಿಗೂಢ ಧರ್ಮಬೀಜದ ವಿಕಾಸದಿನೆ ॥
ಚಿರ ಸಮಾಧಾನ ಕಲ್ಯಾಣ ಲೋಕಕ್ಕದನು ।
ಪೊರೆವನೆ ಜನೋದ್ಧಾರಿ—ಮರುಳ ಮುನಿಯ ॥ ೫೨೫

ತನುವಿನಂಗೀಕಾರೆ ದಾಂಪತ್ಯದರ್ಧಗುಣ ।
ಮನಸಿನಂಗೀಕಾರವಿನ್ನರ್ಧವವರೊಳ್ ॥
ಜನುಮದುದ್ಧಾರವಿರ್ವ್ವರಿಗಮನ್ಯೋನ್ಯ ಬಲ ।
ವಿನಿಮಯ ಸಹಾಯದಿಂ—ಮರುಳ ಮುನಿಯ ॥ ೫೨೬

ಕೊಡಬೇಕು ಕೊಡಬೇಕು ಕೊಡಬೇಕು ನಲುಮೆಯಲಿ ।
ಮೃಡನಿತ್ತನಿತ ಮುಡಿಪವಗೆಂದು ನಿನ್ನಾ ॥
ಕೊಡುಗೆಗಳು ಪರಮೇಶನೊಡಲ ಮೂಳೆಗಳಾಗಿ ।
ಪೊಡವಿಯನು ಧರಿಸುವುವೊ—ಮರುಳ ಮುನಿಯ ॥ ೫೨೭

ತನ್ನ ತಾನರಿತವನು ಅನ್ಯನಾಗದೆ ನಿಂತು ।
ತನ್ನತನದಿಂದನ್ಯರಿಂಗುಪಕರಿಪ್ಪಂ ॥
ತನ್ನತಾನದು ಮುಕ್ತ ಭಿನ್ನನಾಗದ (ನರನು) ।
ಮಾನ್ಯನುರ್ವಿಗೆ ಧನ್ಯ—ಮರುಳ ಮುನಿಯ ॥ ೫೨೮

ಅನಿತಿನಿತು ಶಾಸ್ತ್ರಂಗಳನಿತಿನಿತು ನಿಜಯುಕ್ತಿ ।
ಇನ ಶಶಿ ಪ್ರಭೆಯಿನಿತು ನೆಲದ ಹಬೆಯಿನಿತು ॥
ದಿನದಿನದ ಗತಿಯಿನಿತು ನೆಲದ ಸ್ಮೃತಿಯಿನಿತು ।
ಅನುಗೂಡೆ ಬೆಳಕಿಳೆಗೆ—ಮರುಳ ಮುನಿಯ ॥ ೫೨೯

## ಹೊಂದಾಣಿಕೆ ಒಳ್ಳೆಯದು

ಜನನೀತಿಯೇನತಂತ್ರದ ಮಾರ್ಗವೆನ್ನದಿರು ।
ಕನಸದನುಮಲೆಗಳೆಯೆ ನೆನಸು ಕುಳಿಗಳಿಗಂ ॥
ಅನುಸರಿಪುದಿಕ್ಕಟ್ಟಿನಲಿ ಮಧ್ಯಗತಿಯನದು ।
ಕನಿಕರಿಸು ಲೋಕದಲಿ—ಮರುಳ ಮುನಿಯ ॥ ೫೩೦

ರೂಪ್ಯಕದ ನಾಣ್ಯದಿಂ ಬಿಡಿಕಾಸಿಗೊಂದು ಬೆಲೆ ।
ಒಪ್ಪಹುದು ಕಾಸಬೆಲೆ ರೂಪ್ಯದಿಂ(ದಲ್ತೆ) ॥
ಪ್ರಾಪ್ಯರಿಂತನ್ಯೋನ್ಯ ಜನದೊಟ್ಟು ಬಿಡಿಮಂದಿ ।
ಸುಪ್ರೀತ ರಾಜ್ಯವದು—ಮರುಳ ಮುನಿಯ ॥ ೫೩೧

ಎರಡನಂತಗಳಿಹುವು ಹಿಂದೊಂದು ಮುಂದೊಂದು ।
ಎರಡಮೇಯಗಳು ಮೇಲೊಂದು ಕೆಳಗೊಂದು ॥
ಪರಿಧಿಯಿಲ್ಲದನಂತ ವಿಸ್ತರದ ನಡುವೆ ಜಗ ।
ನೊರೆಯಂತೆ ಹಾಲಿನಲಿ—ಮರುಳ ಮುನಿಯ ॥ ೫೩೨

ಸೂರ್ಯಚಂದ್ರಕ್ಷೋಣಿ ತಾರಕಾಗೋಲಗಳು ।
ಪರ್ಯಯಣದಿಂ ಸವೆದು ಸಡಿಲಲದರಿಂದೇಂ ? ॥
ಪರ್ಯಾಪ್ತವಾಗಿಪಳು ಜಗದಿ ಸತ್ತ್ವವ ಪ್ರಕೃತಿ ।
ಮರ್ಯಾದೆ ಬೇರೆನಿಸಿ—ಮರುಳ ಮುನಿಯ ॥ ೫೩೩

ಸೌಂದರ್ಯಮೂಲವೇಂ ದೃಷ್ಟವಸ್ತುವಿನೊಳಗೊ ।
ಸಂದರ್ಶಕೇಂದ್ರಿಯದ ರುಚಿಶಕ್ತಿಯೊಳಗೋ ॥
ಸಂಧಿಯೋ ದೃಷ್ಟದರ್ಶಕರುಭಯಗುಣದೊಳದು ।
ಸಂಧಾನಬಿಂದುವಲ—ಮರುಳ ಮುನಿಯ ॥ ೫೩೪

ನಿಯಮಂಗಳೆನಿತೆನಿತೊ ಸೃಷ್ಟಿಚರ್ಯೆಯೊಳಿಹುವು ।
ಆಯಮಂಗಳುಂ ನಿಯಮಗಳ ಮೀರ್ದುವಂತು ॥
ಸ್ವಯಮುತ್ಥ ನಿಯಮಮಾಯಮಪ್ರಚಯವೀಜಗವು ।
ಸ್ವಯಕಾರಿಯದರಿಂದೆ—ಮರುಳ ಮುನಿಯ ॥ ೫೩೫

ಕ್ರಮದ ಗರ್ಭದೊಳತಿಕ್ರಮಕಿಣ್ವ ಸೃಷ್ಟಿಯಲಿ ।
ಸುಮ ಮಧುವಿನಂತರದೊಳುನ್ಮಾದ ಬೀಜ ॥
ಅಮರಾಂಶವೊಂದು ಮರ್ತ್ಯಾಕೃತಿಯ ಗಹ್ವರದಿ ।
ರಮಣೀಯಮಿಂತು ಜಗ—ಮರುಳ ಮುನಿಯ ॥ ೫೩೬

## ಸಹಬಾಳ್ವೆಯೇ ಸೊಗಸು

ಬಿಡಿ ಬಿಡಿಯ ಬಾಳೇನು ಗಿಡದಿ ಬಿದ್ದಿಹ ಕುಡಿಯು ।
ಬೆಡಗಿಲ್ಲ ಬೆಳೆಯಿಲ್ಲ ಬಾಡುತಿಹ ಬಾಳು ॥
ಸಡಗರಿಪ ತಳಿರ ನಡುಸೊಗಸಿನಲಿ ಪಾಲುಂಟು ।
ಒಡವಲ್ಲ ಕೂಡಬಾಳ್—ಮರುಳ ಮುನಿಯ ॥ ೫೩೭

ಪತಿ ಮನೆಯು ತನದೆಂದು ಸತಿ ಸಿರಿಯು ತನದೆಂದು ।
ಪ್ರತಿಪಕ್ಷಗಳ ಹೂಡೆ ದಾಂಪತ್ಯಸುಖವೇಂ ? ॥
ದ್ವಿತಯ ಭಾವವ ಮೀರ್ದ ಜೀವನೈಕ್ಯದಿನಲ್ತೆ ।
ಹಿತವಹುದು ಸಂಸಾರ—ಮರುಳ ಮುನಿಯ ॥ ೫೩೮

ದೊರೆ ತನದು ಒಲಮೆಂದು ಜನ ತಮದು ನೆಲನೆಂದು ।
ಪರಿಪಂಥದಲಿ ಪೊಣರೆ ರಾಜ್ಯ ವಿಷಮಿಸದೇಂ ? ॥
ದೊರೆಯವರ ಮನವರಿತು ಜನರವನ ಹೊರೆಯರಿತು ।
ಇರುತನವ ಮೀರೆ ಸೊಗ—ಮರುಳ ಮುನಿಯ ॥ ೫೩೯

ಹೃದಯವರಸುವುದೊಂದು ನೆಲೆಯ ತನ್ನಿರಸಕೆ ।
ನದಿ ಸಾಗರವನರಸಿ ಪರಿದೋಡುವಂತೆ ॥
ಎದೆಹಾಲ ಶಿಶುಗೂಡದಿರೆ ತಾಯ್ಗೆ ನೋವಲ್ತೆ ।
ಬದುಕಿಲ್ಲವೆದೆಮಿಡಿತ—ಮರುಳ ಮುನಿಯ ॥ ೫೪೦

ಅಳುವರೊಡನಳುತಳುತೆ ನಗುವರೆಡೆ ನಗುನಗುತೆ ।
ಬಲುಹದೋರುವರೊಡನೆ ಬಲುಹನುಬ್ಬಿಸುತೆ ॥
ಹುಲುಸುಬೆಳೆ ಬೇಕೆಂಬನಿಗೆ ಹುಲುಸುದೋರುತ್ತೆ ।
ಸಲಿಸವರಿಗವರಿಚ್ಛೆ—ಮರುಳ ಮುನಿಯ ॥ ೫೪೧

## ನಿರ್ವೀರ್ಯತನ ಬೇಡ

ಉರ್ವರೆಯಪೇಕ್ಷಿಸಿರೆ ನಿನ್ನ ಬಲ ಸಾಹಸವ ।
ನಿರ್ವಿಣ್ಣತೆಯಿನಡಗಿ ಮುದುಗುವುದೆ ಸಾವು ॥
ನಿರ್ವಹಿಸು ಲೌಕಿಕವ ಸಾತ್ತ್ವಿಕದ ಶೌರ್ಯದಿಂ ।
ನಿರ್ವೀರ್ಯತನ ಬೇಡ—ಮರುಳ ಮುನಿಯ ॥ ೫೪೨

ಎದೆಗಟ್ಟಿಯೆದೆಗಟ್ಟಿಯೆದೆಗಟ್ಟಿ ಯೆನ್ನುತಿರು ।
ಪದ ಜಾರಿ ಬಿದ್ದಂದು ತಲೆ ತಿರುಗಿದಂದು ॥
ಬದುಕೇನು ಜಗವೇನು ದೈವವೇನೆನಿಪಂದು ।
ಅದಿರದೆದೆಯೇ ಸಿರಿಯೊ—ಮರುಳ ಮುನಿಯ ॥ ೫೪೩

ದುಃಖದುದರದಿ ಕಡಲ ಬಾಡಬದವೊಲು ಸತ್ತ್ವ ।
ಮಿಕ್ಕಿಹುದು ನಿನ್ನೊಳು ವಿಮೋಚನೇಚ್ಛೆಯಲಿ ॥
ಪ್ರಾಕೃತದ ನಿಗಳ ಕೈಗಳ ಬಿಗಿಯ ತೋಳಿಂದ ।
ಕುಕ್ಕದನು ತಿಕ್ಕದನು—ಮರುಳ ಮುನಿಯ ॥ ೫೪೪

ಕವಿ ತತ್ತ್ವದರ್ಶಕರು ವಿಜ್ಞಾನಯೋಜಕರು ।
ನವಧರ್ಮಬೋಧಕರು ರಾಷ್ಟ್ರಚೋದಕರು ॥
ಅವತರಿಸಿ ಮರಮರಳಿ ತೋರಿಹರು ಪುರುಷತ್ವ-।
ದವಿನಶ್ಯತೆಯ ನೋಡು—ಮರುಳ ಮುನಿಯ ॥ ೫೪೫

ಸೊಗಸುಗಳನೆಸಗುತ್ತ ಲೋಕಸಾಮಗ್ರಿಯಲಿ ।
ಸೊಗ ದುಗುಡಗಳ ನಡುವೆ ಮತಿಯನೆಡವಿಸದೆ ॥
ಜಗದಾತ್ಮವನು ನೆನೆದು ಸರ್ವಹಿತದಲಿ ಬಾಳ್ವ ।
ಪ್ರಗತಿ ಪೌರುಷ ವಿಜಯ—ಮರುಳ ಮುನಿಯ ॥ ೫೪೬

ಆದ್ಯಂತರಹಿತವಾ ಪೌರುಷ ಪ್ರಗತಿಕಥೆ ।
ಸಾಧ್ಯವಹುದೆಲ್ಲೊಳಿತ್ತೆನುವ ಸಾಸವದು ॥
ಸದ್ಯಕಾಗದ ಸಿದ್ಧಿ ನಾಳೆಗಾದೀತೆನುವ ।
ಉದ್ಯಮೋತ್ಸಾಹವದು—ಮರುಳ ಮುನಿಯ ॥ ೫೪೭

ಮಳೆಯ ಹೊಡೆತಕೆ ಸಿಕ್ಕಿ ಹಳೆಯ ಮನೆ ಬೀಳ್ವುದೇ-।
ನಿನಗೆ ಬೇಸರ ತರುವ ದಿನದಿನದ ಮಾತು ॥
ಅಳಿದ ಮನೆಯನಂ ಮತ್ತೆ ನಿಲಿಸಿ ಕಟ್ಟಿಸಿ ಬೆಳಕ-।
ಗಳಿಸುವವೊಲ್ ಯತ್ನಿಸೆಲೆ—ಮರುಳ ಮುನಿಯ ॥ ೫೪೮

ಕುಸಿದು ಬೀಳಲಿ ಧರಣಿ ಕಳಚಿ ಬೀಳಲಿ ಗಗನ ।
ನಶಿಸಲೀ ನಿನ್ನೆಲ್ಲವೇನಾದೊಡೇನು ? ॥
ಬಸವಳಿಯದಿರು ಜೀವ ವಸಿಸು ಶಿವಸತ್ತ್ವದಲಿ ।
ಕುಶಲವದೆಗಟ್ಟಿಯಿರೆ—ಮರುಳ ಮುನಿಯ ॥ ೫೪೯

ಕಡುಹೇಡಿ ಯಾರಯ್ಯ ? ಬಡತನಕೆ ಹೆದರುವವನು ।
ಎಡರುಗಳನೆದುರಿಸಲಿಕೆದೆಯಿಲ್ಲದವನು ॥
ನಡುಗುವನು ಸತ್ಯದುಲಿಯನು ಕೇಳಿ (ಜಗದೊಳಗೆ) ।
ನಡೆಸನವ ಜೀವನವ—ಮರುಳ ಮುನಿಯ ॥ ೫೫೦

ಕಷ್ಟಭಯತೋರ್ದಂದು, ನಷ್ಟನಿನಗಾದಂದು ।
ದೃಷ್ಟಿಯನು ತಿರುಗಿಸೊಳಗಡೆಗೆ ನೋಡಲ್ಲಿ ॥
ಸೃಷ್ಟಿಯಮೃತದ್ರವಂ ಸ್ರವಿಸುವುದು ಗುಪ್ತಿಯಿಂ ।
ಪುಷ್ಟಿಗೊಳ್ಳದರಿಂದೆ—ಮರುಳ ಮುನಿಯ ॥ ೫೫೧

## ವಿಹರಿಸುವ ರೀತಿಯಿದು

ಅಹಿಮುಖಸಹಸ್ರದೊಳಗೊಂದುಸಿರ್ವನ್ ಆ ಶೇಷ ।
ಬಹುಜೀವದೊಳಗೊಂದೆ ಪರಮಾತ್ಮಸತ್ತ್ವ ॥
ಸಿಹಿಯನೋ ಕಹಿಯನೋ ಮುಖ ಸವಿವುದಸುವಲ್ಲ ।
ವಿಹರಿಸುವ ರೀತಿಯಿದು—ಮರುಳ ಮುನಿಯ ॥ ೫೫೨

ಸಿರಿಯೇಕೊ ಸೌಖ್ಯಕ್ಕೆ ? ಅರುಣಂಗೆ ಬಾಡಿಗೆಯೆ ? ।
ಧರೆಯ ದಿನದಿನದ ಬಣ್ಣಗಳಿಗೇಂ ಬೆಲೆಯೆ ? ॥
ಹರುಷವಂಗಡಿಸರಕೆ ? ಹೃದಯದೊಳಚಿಲುಮೆಯದು ।
ಸರಸತೆಯೆ ಸಿರಿತನವೊ—ಮರುಳ ಮುನಿಯ ॥ ೫೫೩

ಬಡವನಾರ್ ? ಮಡದಿಯೊಲವಿನ ಸವಿಯನರಿಯದನು ।
ಹುಡುಗರಾಟದಿ ಬೆರೆತು ನಗಲರಿಯದವನು ॥
ಉಡುರಾಜನೋಲಗದಿ ಕುಳಿತು ಮೈಮರೆಯದನು ।
ಬಡಮನಸೆ ಬಡತನವೊ—ಮರುಳ ಮುನಿಯ ॥ ೫೫೪

ಬೆಂದ ಬೇಳೆಗೆ ಬೆರಸಿದುಪ್ಪಿನಿಂದಡುಗೆ ರುಚಿ ।
ಮುಂದುಪ್ಪು ಬಳಿಕ ಬೇಳೆಯಿನಡುಗೆಯಹುದೆ ? ॥
ಮಂದಿಮನೆಗಳ ಸೆಕೆಗೆ ಮತುಗೊಳದೊರಟುಜೀವ- ।
ಕಂದೀತೆ ವೇದಾಂತ—ಮರುಳ ಮುನಿಯ ॥ ೫೫೫

ನಿರ್ಗುಣ ನಿರಾಕಾರ ಪರತತ್ತ್ವಗಿರಿ ಶಿಖರ ।
ದುರ್ಗಮಮದೆನ್ನಿಸಿರೆ ಮನದ ದುರ್ಬಲದಿಂ ॥
ಮಾರ್ಗವನು ನೀನರಸು ಸಗುಣ ಸಾಕಾರಂಗ- ।
ಳೇರ್ಗಲ್ಲ ಮೆಟ್ಟಲಿಂ—ಮರುಳ ಮುನಿಯ ॥ ೫೫೬

ಭಯಕಷ್ಟಗಳಲಿ ಧೈರ್ಯಕದೊಂದು ದೈವಮತ ।
ದಯಿತೆಯೊರ್ವಳು ಜಗದ ಭರದಿ ಪಾಲ್ಗೊಳಲು ॥
ನಿಯತದೊಂದುದ್ಯೋಗ ಉದರ(ಗಳ) ಪೋಷಣೆಗೆ ।
ತ್ರಯದಿಂದ ನೀಂ ಧನ್ಯ—ಮರುಳ ಮುನಿಯಂ ॥ ೫೫೭

ಮುದಿತನದೊಳೆಳೆಯರೊಡನಾಡುತ್ತ ನಲಿವವನು ।
ಬದುಕಿನರ್ಥವನರಿತನ್ ಆದರೆ ಸವಿಯುಂಡನ್ ॥
ಸೊದೆಯ ಕಣವಡಗಿಹುದು ಜೀವದಾಳದೊಳಲ್ಲ ।
ಆದರೆ ಸವಿ ಶಿಶುಲೀಲೆ—ಮರುಳ ಮುನಿಯ ॥ ೫೫೮

ಕೊಳದೊಳಲೆ ಬಳೆಯಾಗಿ ಸುಳಿಯಾಗಿ ಹರಹರಡಿ ।
ವಲಯ ವಲಯಗಳಾಗಿ ದಡವ ಸೋಕುವವೋಲ್ ॥
ಬಳೆಯಾಗಿ ನಿನ್ನ ಬಾಳ್ ವಲಯವಲಯಗಳಾಗಿ ।
ಬಲುಬಾಳನೊಳಗೊಳ್ಗೆ—ಮರುಳ ಮುನಿಯ ॥ ೫೫೯

ಕನ್ಯೆ ಪರನೊಡವೆ ತನದಲ್ಲವೆಂದರಿದಿದ್ದು ।
ನನ್ನಿಯಿಂದವಳ ಪೋಷಿಪ ಜನಕನಂತೆ ॥
ಮನ್ನಿಪುದು ಜಗವನೀಂ ನ್ಯಾಸವಸ್ತುವದೆಂದು ।
ನಿನಗೇನುಮೆಳಸದೆಯೆ—ಮರುಳ ಮುನಿಯ ॥ ೫೬೦

ಲೋಕಾನುಭವವೊಂದು ಜೀವಸ್ವಸಂಸ್ಕಾರ ।
ಬೇಕು ಬೇಡದ ಹದಗೊಳಿಪ ಪರಿಷ್ಕಾರ ॥
ಆಕುಲತೆ ಬಿಟ್ಟ ಚಿತ್ತಕೆ ಶಾಂತಿಯಾಧಾರ ।
ಏಕಾತ್ಮ್ಯವೈಹಾರ—ಮರುಳ ಮುನಿಯ ॥ ೫೬೧

## ಕಷ್ಟವೂ ಒಳ್ಳೆಯದೆ

ತನುರುಜೆಯು ವಿಷಕರಗಿ ಬಣ್ಣಬಣ್ಣದಿ ಪರಿಯೆ ।
ಗುಣವಪ್ಪುದೌಷಧಕೆ ಕಾಲವನುವಾಗೆ ॥
ಮನದ ರುಜಿನವುಮಂತು ಕರಗಿ ಹೊರಹರಿಯದಿರೆ ।
ತಣಿವೆಂತು ಜೀವಕ್ಕೆ—ಮರುಳ ಮುನಿಯ ॥ ೫೬೨

ಚಳಿಯಿನದಿರದೆಯೊ ಬೇಸಗೆಯಿನುಮ್ಮಳಿಸದೆಯೊ ।
ಮಳೆಯಿಂದ ತೊಯ್ಯದೆಯೊ ಧರೆ ಬಸುರಿಯಹಳೆ ? ॥
ತೊಳಸುವಳು ಜೀವಿಪಿಷ್ಟವ ಮಡಕೆಯಲಿ ಸೃಷ್ಟಿ ।
ತಳಮಳವೆ ಪರಿಪಾಕ—ಮರುಳ ಮುನಿಯ ॥ ೫೬೩

ಸಾಕಾರದೇಣಿಯೊ ನಿರಾಕಾರ ಹರ್ಮ್ಯಕ್ಕೆ ।
ಲೋಕವೇಣಿಯೊ ಪರಬ್ರಹ್ಮದರ್ಶನಕೆ ॥
ಬೇಕುಬೇಡಗಳ ನೀನೀತತ್ತ್ವದಿಂ ಗಣಿಸಿ ।
ವ್ಯಾಕುಲತೆಯನು ನೀಗು—ಮರುಳ ಮುನಿಯ ॥ ೫೬೪

ನೆನೆನೆನೆದು ಮನಸಳಲಿ ಅಳುತಳುತ ನೆನೆಬರಲಿ ।
ಗುಣವನಂತಾನುಮೊಳಕಿಳಿಯಿಸುಗೆ ನೇಹಂ ॥
ಅನುಚಿಂತೆಗೆಡೆಯಾಗಿಸುವ ಮಿತ್ರಮೃತಿ ದುಃಖ ।
ಮನಕೆ ಪರಿಪಾವಕವೊ — ಮರುಳ ಮುನಿಯ ॥ ೫೬೫

ಪ್ರೀತಿ ತಪ್ಪೇನಲ್ಲ ಆತುಮವು ಮಣ್ಣಲ್ಲ ।
ಯಾತನೆಯನರಿಯದನ್ ಸುಖವರಿತನಲ್ಲ ॥
ಆತುರದಿ ನೋಯ್ವೆದೆಯ ಬೆಂಕಿಸೋಕದ ನರನು ।
ಪೂತಾತ್ಮನೆಂತಹನೊ — ಮರುಳ ಮುನಿಯ ॥ ೫೬೬

## ರಾಗ - ದ್ವೇಷ

ರಣಮೂಲವಿಹುದು ಲೋಕದ ಹೃದಯಗಹ್ವರದಿ ।
ಶುನಕ ಶುನಕವನೋಡಿ ಕೆರಳುವುದು ಬರಿದೆ ॥
ಅನುದಿತಾಶಂಕೆಗಳು ಭೀತಿಗಳಸೂಯೆಗಳು ।
ಸೆಣಸುತಿರ್ಪುವು ನರನ — ಮರುಳ ಮುನಿಯ ॥ ೫೬೭

ಚಿತ್ತವಿಕ್ಷೋಭೆ ತಾಂ ಮೃತ್ಯುಸಾಕ್ಷಾದ್ರೂಪ ।
ಪ್ರತ್ಯಕ್ಷಯಮ ನಿನ್ನೊಳಿದ್ದಿಹ ಕ್ರೋಧ ॥
ಕತ್ತಿಯೊಂದಲಗು ತರಿಯಲ್ಪಗೆಯನಿನ್ನೊಂದು ।
ಕಿತ್ತುವುದು ನಿನ್ನನೇ — ಮರುಳ ಮುನಿಯ ॥ ೫೬೮

ದೇಶ ದೇಶದ ಚರಿತೆ ಮಾನುಷ್ಯನಾಶಕಥೆ ।
ಘಾಸ ಪಸಿರೆಂತಂತು ಮಸಣಮುಂಟಲ್ಲಿ ॥
ರೋಷ ಮತ್ಸರಬೀಜ ಮನುಜವಿಧ್ವಂಸಕ್ಕೆ ।
ಶಾಶ್ವತರಹಸ್ಯವದು — ಮರುಳ ಮುನಿಯ ॥ ೫೬೯

ತಾಯಿ ಮಕ್ಕಳಿಗೂಟವಿಡುವಾಗಲೊಂದಕ್ಕೆ ।
ಕಾಯಿ ಹೆಚ್ಚಿತು ಕೆನೆಮೊಸರೊಂದಕ್ಕೆ ತಮಗ– ॥
ನ್ಯಾಯವೆಲ್ಲೆಂದಣ್ಣತಮ್ಮದಿರು ಹೋರುವರೆ ।
ದಾಯವಂತಿಕೆಯೊಳಗೆ—ಮರುಳ ಮುನಿಯ ॥ ೫೭೦

ಮೃಗದಂಶವಳಿವನಕ ಮೃಗತೃಷ್ಣೆ ಕಳೆವನಕ ।
ಮಿಗಿಲು ತನುವಾತ್ಮದಿಂದೆಂಬುದಿರುವನಕ ॥
ಸೊಗವೇಕೆ ಸೋದರರಂಗೆಂಬ ಕರುಬಿರುವನಕ ।
ಜಗಕೆ ಶಾಂತಿಯದೆಂತೊ—ಮರುಳ ಮುನಿಯ ॥ ೫೭೧

## ಮರೆಯದಿರು ತರತಮವ

ಬೆರಲೈದು ಸಮವಾಗೆ ಕರವಮಾಳ್ಪ ಕೆಲಸವೇಂ ? ।
ಉರಶಿರಗಳೊಂದಾಗೆ ಸತಿಪತಿಯರೆಂತು ? ॥
ತರತಮವಿವೇಕದಿಂ ಗುಣಲಾಭ ಜೀವನಕೆ ।
ಮರೆಯದಿರು ತರತಮವ—ಮರುಳ ಮುನಿಯ ॥ ೫೭೨

ನಗುನಗುತ ಕರೆಯುವವೊಲಾಡುತಿತ್ತು ಗುಲಾಬಿ ।
ಸೊಗದ ವಾಸನೆಗೆಂದು ಪಿಡಿಯೆ ನಿರ್ಗಂಧ ॥
ಮುಗಿದೆ ನಾಂ ಕೈಯ ಮುಳ್ಳು ಚುಚ್ಚಲಿಲ್ಲೆಂದು ।
ಜಗದ ಸಂಗತಿಯಷ್ಟು—ಮರುಳ ಮುನಿಯ ॥ ೫೭೩

ವಾಮಚರ್ಮಗಳಿರ್ಪುದುಂಟು ಮೈಮೆಯ ತಳದಿ ।
ಗ್ರಾಮಸಾರವ ಕೊಳ್ಳದಾರಾಮವುಂಟೆ ? ॥
ತಾಮರಸವನು ಬೇಳ್ಪೊಡದರ ಕೀಳ್ಕೆಸರ ಮರೆ ।
ಶ್ಯಾಮಸಿತ ದಾಂಪತ್ಯ—ಮರುಳ ಮುನಿಯ ॥ ೫೭೪

ಫಲಪುಷ್ಪ ಸವಿಮದು ಗಿಡದ ಬೇರೆಣಿಸದಿರು ।
ಮಲಸಾರ ಬುಡದೊಳಿರೆ ಮೇಲೆ ರಸಗಂಧ ॥
ಕೆಲ ಚೆಲುವು ಹೊಲಸಿಂದೆ ಕೆಲ ಹೊಲಸು ಚೆಲುವಿಂದೆ ।
ಇಳೆಯು ಕೆಣಕುವುದೇಕೆ ?—ಮರುಳ ಮುನಿಯ ॥ ೫೭೫

ಎಣಿಪುದೊಳಿತನು ಕೇಡನು ದ್ವಂದ್ವಮೆಲ್ಲವನು ।
ತನಗದೆಂತೇದೆಂಬ ಪದದಿನೆಲ್ಲವನು ॥
ಜನಿಪುದು ಶುಭಾಶುಭದ್ವಂದ್ವಂಗಳದರಿಂದೆ ।
ಪುಣ್ಯಪಾಪಗಳಂತು—ಮರುಳ ಮುನಿಯ ॥ ೫೭೬

ಎರಡು ಸಿರಿ ನರನಿರವನಾಳುವುವು ಲೋಕದಲಿ ।
ಹೊರಗೊಂದು ಪೇಟೆಯಿನ್ನೊಂದೊಳಗೆ ಹೃದಯ ॥
ಹಿರಿದನೊಂದನು ಮಾಡೆ ಕಿರಿದಪ್ಪುದಿನ್ನೊಂದು ।
ತರತಮವ ನೋಡಿ ತಿಳಿ—ಮರುಳ ಮುನಿಯ ॥ ೫೭೭

## ಸಮತೆ – ಅಸಮತೆ

ಸಮತೆ ಸಮತೆಯೆನುತ್ತ ಬೊಬ್ಬೆಯಿಡುತಿದೆ ಲೋಕ ।
ಯಮಲಾರ್ಥದಾಕರ್ಷೆಯಶಾಘೋಷಣೆಯಲಿ ॥
ಕ್ರಮವೆಲ್ಲರಿಗವೊಂದೆ ಗುಣಗಣನೆಗೆನುತಮು- ।
ತ್ತಮನಿಲ್ಲ ತನಗೆಂದು—ಮರುಳ ಮುನಿಯ ॥ ೫೭೮

ಅಸಮತೆಗೆಮೊಡೆಯುಂಟು ಸೃಷ್ಟಿನಿರ್ವಾಹದಲಿ ।
ವಸುಧೆಯಲಿ ನೋಡು ಗಿರಿಝರಿಯರಣ್ಯಂ ॥
ಕುಸುಮ ಫಲ ಪರ್ಣಂಗಳೊಂದರಂತೊಂದಿಹುವೆ ? ।
ಬಿಸಿ ಚಳಿಯ ಋತುಗಳೇಂ ?—ಮರುಳ ಮುನಿಯ ॥ ೫೭೯

ಅಸಮತೆಗಮೆಡೆಯುಂಟು ವಿಶ್ವವ್ಯವಸ್ಥೆಯಲಿ ।
ವಸುಧೆಯೊಳಿಗುಂಟೇನು ಚಾಪೆ ಚಪ್ಪಟೆಯುಂ ॥
ಕುಸುಮ ಫಲ ಪರ್ಣಂಗಳೊಂದರಂತೊಂದಿಹವೆ ? ।
ಪಶು-ಪಕ್ಷಿಗಳದೇನು ?—ಮರುಳ ಮುನಿಯ ॥ ೫೮೦

ಒಮ್ಮೆಯ್ಯೊಳಿಮ್ಮೊಗಂ ಗಂಡಭೇರುಂಡಕ್ಕೆ ।
ಇಮ್ಮೊಗಮಖಂಡಪರಮಾದಿಸತ್ಯಕ್ಕೆ ॥
ಬ್ರಹ್ಮವೊಂದಿನ್ನೊಂದನಂತ ದ್ವೈತಸಮೂಹ ।
ನಿರ್ಮೂರ್ತಮೂರ್ತಗಳು—ಮರುಳ ಮುನಿಯ ॥ ೫೮೧

ಬೇರೆ ನಾಂ ಜಗವಿನೆಂಬಾ ಭೇದವಳಿವಿರಲು ।
ವೈರಾಗ್ಯ ಸೌಭಾಗ್ಯ ಭೇದ ಕಳೆದಿರಲು ॥
ಊರು ನಾಂ ಕಾಡು ನಾನೆಂಬೆಣಿಕೆ ಸವೆದಿರಲು ।
ಭಾರವೇನಾತಂಗೆ ?—ಮರುಳ ಮುನಿಯ ॥ ೫೮೨

ಕೇಶಸಾಮ್ರಾಜ್ಯದಲಿ ಮೀಶೆಯೇ ದೊರೆಯಂತೆ ।
ಶಾಸನವದೇಂ ? ಪಕ್ಷಪಾತ ಕೆಲರೊಳಗೆ ॥
ಸ್ತ್ರೀ ಸಮೂಹಕ್ಕಿಲ್ಲ ಮೋಸವಾಯ್ತಿದರಿಂದೆ ।
ಲೇಸಮಾಡುವುದೆಂತೊ—ಮರುಳ ಮುನಿಯ ॥ ೫೮೩

## ವ್ಯರ್ಥವಲ್ಲ ಸೃಷ್ಟಿ

ಸೃಷ್ಟಿವ್ಯವಸ್ಥೆಯೊಳ್ ವ್ಯರ್ಥಮಾವುದುಮಲ್ತು ।
ಬೆಟ್ಟ ನದಿ ಕಾಡು ಮರುಭೂಮಿ ಮಣ್ ಧೂಳು ॥
ವೃಷ್ಟಿ ಹಿಮವಾತಂಗಳಾಗಿಪ್ಪುವೊಟ್ಟನಿಂ ।
ಒಟ್ಟನಿಂ ನೋಡದನು—ಮರುಳ ಮುನಿಯ ॥ ೫೮೪

ಸೃಷ್ಟಿಕರ್ತನೆ ಕೃತಿಗೆ ಪುಷ್ಟಿಯಂ ನೀಡದೊಡೆ ।
ನಷ್ಟ ತನಗೇ (ಎಂಬುದ)ಷ್ಟರಿಯದವನೆ ॥
ತುಷ್ಟಿಗಳನದರಿಂದಲಷ್ಟಿಷ್ಟು ಕೊಟ್ಟು ಉ- ।
ಚ್ಛಿಷ್ಟವನು ಬಿಟ್ಟಿಹನು—ಮರುಳ ಮುನಿಯ ॥ ೫೮೫

ಸೃಷ್ಟಿವ್ಯವಸ್ಥೆಯೊಳ್ ವ್ಯರ್ಥಮಾವುದುಮಿರದು ।
ಬೆಟ್ಟ ನದಿ ಮರುಭೂಮಿ (ಮಣ್) ಕಾಡು ಕಣಿವೆ ॥
ವೃಷ್ಟಿಕಾರಕಗಳವು ವಾಯುಶೋಧಕಗಳವು ।
ದಿಟ್ಟಿಸಾಳದಿ ನಿಜವ—ಮರುಳ ಮುನಿಯ ॥ ೫೮೬

ಮಿಂಚಿಂದೆ ಮಣ್ಕಣಕೆ ಕಣದೆ ಮಿಂಚಿಂದಾಚೆ ।
ಸಂಚರಿಸುತಿಹುದೊಂದಲೌಕಿಕದ ತೇಜಂ ॥
ಸಂಚಿಯೊಂದರೊಳೀ ಪ್ರಪಂಚವನ್ನಿಟ್ಟಿದುದು ।
ಸಂಚದರದಲ್ಲವಿದು—ಮರುಳ ಮುನಿಯ ॥ ೫೮೭

ವಿಶ್ವವೀಶ್ವರ ಕಾವ್ಯವವನಕಟವಿಕಟ ಕಥೆ ।
ಶಾಶ್ವತನಶಾಶ್ವತಾಕಾರ ಲೀಲೆ(ಯಿದು) ॥
ಬೇಸರವ ಕಳೆಯಲ್ಕೆ ಹಸನವವಮಾಡಿಹನು ।
ಆಸ್ವಾದ್ಯವೆಲ್ಲರ್ಗೆ—ಮರುಳ ಮುನಿಯ ॥ ೫೮೮

ಧರ್ಮಸೂಚನೆಗಾಗುವನಿತುಂ ನಿಯಮವನು ನಿಜ ।
ಮರ್ಮಿತೆಯಂ ಸೂಚಿಪ್ಪನಿತುಂ ಯದೃಚ್ಛೆಯನು ॥
ನಿರ್ಮರ್ತ್ಯಮರ್ತ್ಯಗಳನೊಡವೆರಸಿ ಪರಮೇಷ್ಠಿ ।
ನಿರ್ಮಿಸಿಹನೀ ಜಗವ—ಮರುಳ ಮುನಿಯ ॥ ೫೮೯

ಕರ್ತನಂಶಾಂಶ ಸಂಯೋಜನೆಯ ಕಾಣ್ಬಂಗೆ ।
ವ್ಯರ್ಥಲೇಶಮುಮಿರದು ಸೃಷ್ಟಿಕಾರ್ಯದಲಿ ॥
ಕರ್ತವ್ಯವಿಲ್ಲೆನಗೆ ಬಾಳು ಪಾಳೆನ್ನದಿರು ।
ಸಾರ್ಥಕ ಪರೋಕ್ಷವದು—ಮರುಳ ಮುನಿಯ ॥ ೫೯೦

ಮಾರನಿಳೆಯೊಳ್ ಸುರಾವಾಟಿಕೆಯನಿರಿಸದಿರೆ ।
ಗಾರುಡಿಯನಾಡದಿರೆ ರುದ್ರಶಕ್ತಿಗಳು ॥
ವೈರಿಂಚಿಕರ್ಮದಲಿ ಚಾತುರ್ಯವಿನ್ನೇನು ।
ಹೋರಿಪ್ಪುದವನ ಕಲೆ—ಮರುಳ ಮುನಿಯ ॥ ೫೯೧

ಬೆಟ್ಟತಿಟ್ಟುಗಳಿಂದೆ ವಾಯುರಭಸಕೆ ತಡೆಯೆ ? ।
ತಿಟ್ಟುತಗ್ಗುಗಳಿಂದೆ ಹೊಳೆ (ಹರಿಯದಿಹುದೆ ?) ॥
ರಟ್ಟೆಬೆಟ್ಟಗಳಂ ಬಾಗದೆ (ನೆಟ್ಟಗಿರಬಹುದೆ ?)
ಸೊಟ್ಟಿಗುಂ ಬೆಲೆಯುಂಟು—ಮರುಳ ಮುನಿಯ ॥ ೫೯೨

## ಕರ್ಮಯೋಗ

ಅಂದಿನಂದಂದಿಗದು ಮುಂದೆ ಸಾಗುವ ಲೀಲೆ ।
ಸಂಧಾನಗಳನೆಲ್ಲ ಮೀರ್ದುದಾ ಲೀಲೆ ॥
ಅಂದಂದಿಗಂದಂದು ಬಂದಿಹುದು ಕರ್ತವ್ಯ ।
ಸಂದುದನು ನಿರ್ವಹಿಸು—ಮರುಳ ಮುನಿಯ ॥ ೫೯೩

ಧರ್ಮವನು ಜಾನಕೀರಾಮಚರಿತೆಯೊಳಮಧಿ- ।
ಧರ್ಮವನು ಕೃಷ್ಣಚರಿತಂಗಳೊಳಮರಿತು ॥
ಕರ್ಮಿಯಾಗಿರುತ ನಿಷ್ಕರ್ಮಶಾಂತಿಯ ಪಡೆವ ।
ಮರ್ಮವನು ಕಲಿಯೆಲವೊ—ಮರುಳ ಮುನಿಯ ॥ ೫೯೪

ಕರ್ತವ್ಯದ ಕ್ಷೇತ್ರ ಪರಿಮಿತಿಯ ಗುರುತಿಸಿಕೊ ।
ಶಕ್ತಿ ನಿನಗಹುದು ಮಿತ ಕೈಯುಡುಗಿ ಸೋಲ್ವೆ ॥
ಸ್ಮರ್ತವ್ಯದ ಕ್ಷೇತ್ರಸೀಮೆಗಳ ವಿಸ್ತರಿಸು ।
ಸ್ವಾರ್ಥದಿಂ ಪರಮಾರ್ಥ—ಮರುಳ ಮುನಿಯ ॥ ೫೯೫

ದುಡಿ ಲೋಕದಲಿ ಮರುಳೆ ದುಡಿದೊಡಲ ಸವೆಯಿಸೈ ।
ಒಡಲ ಸವೆದಂತೆ ಮನದಲಗು ಸವೆಯುವುದು ॥
ಸಡಗರವು ಕುಗ್ಗುತಿರೆ ಬುದ್ಧಿ ಕಳೆಯೇರುವುದು ।
ಬಿಡೆಗುವಡೆಯುವುದಾತ್ಮ - ಮರುಳ ಮುನಿಯ ॥ ೫೯೬

ಒಳಿತನವನೆಸಗದನು ಬೆಳಕನಿವನರಿಯದನು ।
ತಿಳಿದವನು ನಾನೆಂಬ ನಚ್ಚು ನಿನಗೇಕೆ ? ॥
ಸೆಳೆವುದಾರನದಾವ ಕಾರಣವದೆತ್ತಲಿಗೆ ।
ತುಳಿ ನಿನ್ನ ಪಥವ ನೀಂ—ಮರುಳ ಮುನಿಯ ॥ ೫೯೭

ಆಗಲಿಹುದಾದೀತು ಆದೊಡೇಂ ಪೋದೊಡೇಂ ।
ಈಗಳಿಹ ಕರ್ತವ್ಯವೇನೊ ನೋಡದನು ॥
ತ್ಯಾಗದೊಳ್ ಭೋಗದೊಳ್ ಪ್ರಸ್ತುತೋದ್ಯೋಗದೊಳ್ ।
ಜಾಗರೂಕನೊ ಯೋಗಿ—ಮರುಳ ಮುನಿಯ ॥ ೫೯೮

ಲೋಕಮೈತ್ರಿಗೆ ತಪ್ಪದೇಕಾಂತದಲಿ ನಿಂತು ।
ಸಾಕಲ್ಯವನು ಕಾಣುತೇಕಾಂಶಗಳಲಿ ॥
ಪ್ರಾಕೃತದ್ವಂದ್ವಗಳ ಮೀರ್ದ ಧರ್ಮದಿ ಚರಿಸೆ ।
ಶೋಕ ಭಯವೇಂ ನಿನಗೆ ?—ಮರುಳ ಮುನಿಯ ॥ ೫೯೯

ದುರಿತಕ್ಷಯಂಕ್ಕೆಂದು ಮಾಡೆಲ್ಲ ಮಾಳ್ಕೆಗಳ ।
ಪೊರೆವನಿಳೆಯುನು ನೀನೆ ? ಶಿವನದಧಿಕಾರ ॥
ಧರುಮವನು ಬಿಡದೆ ನೀಂ ದುಡಿ ಗಳಿಸು ನಿರ್ವಹಿಸು ।
ಮರೆಯದಾತ್ಮದ ಹಿತವ — ಮರುಳ ಮುನಿಯ ॥ ೬೦೦

ಗಾಧೇಯು ತಪಕಡ್ಡವಿಡೆ ಮೇನಕಾದಿಗಳ- ।
ನಾದಿತೇಯರ್ ಕಳುಹಿದಂತೆ ಮಾಯೆಗಳು ॥
ರೋಧಗಳನಾಗಿಪುವು ನಿನ್ನ ವ್ರತಂಗಳ್ಗೆ ।
ಸಾಧನೆಗೆ ದೃಢಸಿಲ್ಲೊ—ಮರುಳ ಮುನಿಯ ॥ ೬೦೧

ಗಾಳಿಪಟವೋ ನಿನ್ನ ಬಾಳು ಪೂರ್ವಾರ್ಜಿತವೆ ।
ನೂಲದನು ಮೇಲಕೇಳಿಪುದು ಬಾನೆಲರು ॥
ಬೀಳುವಳುಕಾದಂದು ಶಿವನೊಲವ ಬೇಡಿ ನೀಂ ।
ತೋಳ ಚಳಕವ ನಡಸು—ಮರುಳ ಮುನಿಯ ॥ ೬೦೨

## ಇದು ರಾಜಯೋಗ

ರಾಜಯೋಗದ ಮಾರ್ಗ ಹಿತಮಿತಿಗಳಭ್ಯಾಸ ।
ನೈಜಕನುವಾದ ಶೋಧನೆ ಪರಿಷ್ಕಾರ ॥
ಯೋಜಿಸಿಹುದಲ್ಲಿ ಶುಚಿ ಭೋಗದೊಡನೆ ವಿರಾಗ ।
ಸಾಜವರಿತಾ ಶಿಕ್ಷೆ—ಮರುಳ ಮುನಿಯ ॥ ೬೦೩

ವೇದಿತೆಯೆ ಜೀವಿತತೆ ಲೋಕಸಹವಾಸದಾ- ।
ಮೋದಗಳೆ ಖೇದಗಳೆ ಜೀವನದ ಭಾಗ್ಯಂ ॥
ಮಾದನವನಾಗಿಸದ ವೇದನೆಯು ಬೆಳಸಿಕೊಳೊ ।
ವೇದನೆಯೆ ಚಿತ್ಸತ್ತ್ವ—ಮರುಳ ಮುನಿಯ ॥ ೬೦೪

ಪ್ರಗತಿಪಥಕೆರಡಂಚು ನಿಗಮಾರ್ಥಕೃತವೊಂದು ।
ಜಗದಂಶ ವಿಜ್ಞಾನಕೃತವೊಂದು ನಡುವೆ ॥
ಸುಗಮ ತೋರ್ವಂತೆ ನೀಂ ಚರಿಸಿರ್ಕೆಲಂಗಳಂ ।
ಬಗೆದೊಂದೆ ಯಾತ್ರೆಯೆನೆ—ಮರುಳ ಮುನಿಯ ॥ ೬೦೫

ಏನ ಸಾಧಿಸಿದೊಡೇನೇನ ಭೇದಿಸಲೇನು ? ।
ಮಾನವಂ ತನ್ನ ತಾನರಿಯುದಿರುವಂದು ॥
ಕ್ಷೋಣಿಯೈಸಿರಿಯು ಬೆಲೆ ತನ್ನ ಬೆಲೆಯಿಂದಲ್ತೆ ।
ತಾನಿಳಿಯಲಾವುದೇಂ ?—ಮರುಳ ಮುನಿಯ ॥ ೬೦೬

ಸೃಷ್ಟಿರುಚಿಗಳ ಜಲಕ್ಷೀರಭೇದಕೆ ಹಂಸ ।
ದಷ್ಟ ಹೃದಯವ್ರಣಕೆ ಜಾಂಗುಲಿಕ ವೈದ್ಯ ॥
ದೃಷ್ಟ ರೂಪಗಳೊಳಗದೃಷ್ಟಸತ್ಯದ ಸಾಕ್ಷಿ ।
ಶ್ರೇಷ್ಠ್ಯಜ್ಞನೋ ಯೋಗಿ—ಮರುಳ ಮುನಿಯ ॥ ೬೦೭

ದ್ವೈತಲೀಲೆಗಳ ಪಡುತದ್ವೈತದಲಿ ನೆಲಸಿ ।
ಭೌತ ಸಂಸ್ಕೃತಿಗಳಿನತೀತಪದಕೇರಿ ॥
ಭೀತಿಯೆತ್ತಲುಮಿಲ್ಲದಂತಿರುವ ಶಾಂತಾತ್ಮ ।
ಚಾತುರ್ಯವನು ಗಳಿಸೊ—ಮರುಳ ಮುನಿಯ ॥ ೬೦೮

## ಬಾಳಿಗೊಂದು ನಂಬಿಕೆ

ನಿತ್ಯನಿರ್ಮಲ ಸತ್ತ್ವಝರಿಯೊಂದು ನಿನ್ನಯಾ ।
ಪ್ರಾಕ್ತನಮಲೀಮಸದ ಜೀವನಾಪಗೆಯ ॥
ಪ್ರತ್ಯಹದಿ ಸೇರುತ್ತಲದನು ಪೊಸತಾಗಿಪುದು ।
ಪ್ರತ್ಯಯಿಸು ನೀನದನು—ಮರುಳ ಮುನಿಯ ॥ ೬೦೯

ಸದಸದ್ವಿವೇಕವನಂ ಭಕ್ತರೊಳು ಮಾಡಿಪಂ ।
ಚಿದನಂತ ಭಾಸುರಂ ಸರ್ವಜನಸಂಸ್ಥಂ ॥
ಹೃದಯಶಾಂತರಂಗದಾವಾಸಿ ಲೀಲಾಲೋಲ ।
ಪದವನೀಂ ನಂಬೆಲವೊ—ಮರುಳ ಮುನಿಯ ॥ ೬೯೦

ನೀತಿನಿಷ್ಠಂಗೆ ಜಯವಂತೆ, ರಾಮನೆ ಸಾಕ್ಷಿ ।
ಸೀತೆಯಂ ಪಡೆದನಲ ಕಡೆಗೆ ಲಂಕೆಯಲಿ ॥
ನೂತನ ಯುವೋತ್ಸಾಹವಂದು ಕುಂದಿತ್ತೇನೊ ।
ಆತುರಂ ದೋಷವಲ—ಮರುಳ ಮುನಿಯ ॥ ೬೯೧

ಸದಸದ್ವಿವೇಕಿತಾಪ್ರದನಾತ್ಮನೀಶ್ವರನಂ ।
ನಿಧಿಯುವಂ ಸತ್ಯಕ್ಕೆ ಸತ್ಯಯೋಗಕ್ಕೆ ॥
ಬದುಕವನ ವರವ(ವನ) ಪಿಡಿಯುವನೆ ಶರಣೆಂದು ।
ಅದಿರದಿರು ಕದಲದಿರು—ಮರುಳ ಮುನಿಯ ॥ ೬೯೨

ಮರವ ಪಿಡಿದಿರುವೆಲೆಯು ಗಾಳಿ ಬಿಸಿಲಂಜಿಸವು ।
ಸ್ಥಿರದ ನಂಬುಗೆಯನೆಲೆಯಲಿ ಬಾಳ್ವನಂತು ॥
ಹಿರಿಯೊಂದು ನಚ್ಚಿನಾಸರೆಯಿಲ್ಲದನ ಪಾಡು ।
ತರಗೆಲೆಯ ಪಾಡಹುದೊ—ಮರುಳ ಮುನಿಯ ॥ ೬೯೩

ಎಡರುಗಳ ಕಡಲಿನಲೆ ಸಾಲೆದ್ದು ನಿನ್ನಸುವ ।
ಬಡಿಯುತಿರೆ ದಿಕ್ಕುಗಾಣದ ಕುಂಟುಜೀವಂ ॥
ಪಿಡಿಯೆ ಕೈಗೇನಾನುಮೊಂದೊದವಲೆಂದೆಂಬ ।
ತಡಕಾಟವೇ ಭಕ್ತಿ—ಮರುಳ ಮುನಿಯ ॥ ೬೯೪

ನಂಬು ನೀಂ ದೈವವನು ನಂಬು ಸ್ವಯಂಭುವನು ।
ನಂಬು ಸಾಂಬನ ಮನದಿ ತುಂಬು ಭಕ್ತಿಯನು ॥
ಬಿಂಬವೋ ಕಂಬವೋ ನಂಬಿಕೆಯು ಮಾತ್ರದಿಂ- ।
ದಿಂಬುಗೊಳುವುದು ಜೀವ—ಮರುಳ ಮುನಿಯ ॥ ೬೧೫

## ಆದರ್ಶ ಜೀವನ

ತನ್ನ ಕೈಸೇರಿದೈಸಿರಿಯನನ್ಯಂಗಿತ್ತು ।
ತನ್ನಿ ನನ್ಯಂ ಸಿರಿಯ ಕಸಿದೋಡಿದಂದು ॥
ಅನ್ಯಾಯಿಗನನರಸಿ ದಂಡಿಸಿದ ರಾಘವನೆ ।
ಸಂನ್ಯಸನಕಾದರ್ಶ—ಮರುಳ ಮುನಿಯ ॥ ೬೧೬

ಮುಳ್ಳುತುಂಬಿಹವು ಜಗದ ದಾರಿಗಳದೆತ್ತಲುಂ ।
ಕಾಲ್ತಳಕೆ ನೀಂ ಜ್ಞಾನದೆಲೆಹಸುರ ಸವರು ॥
ಮುಳ್ತಲೆಯ ಬಾಗಿಪುದು ನೆಲ ಹುಲ್ಲು ಹೊದೆಯುವುದು ।
ಬಾಳ್ತನದ ತಂತ್ರವಿದು—ಮರುಳ ಮುನಿಯ ॥ ೬೧೭

ಬಹುತೆಯಿಂದೇಕತೆಗೆ ಗೃಹವಂಶರಾಷ್ಟ್ರಗಳು ।
ಬಹುತೆ ಪ್ರಕೃತಿಯ ಸಿದ್ಧಿ ಏಕತೆ ಮನುಜಸಿದ್ಧಿ ॥
ಅಹಮಿನೊಳೆಲ್ಲವನೆಲ್ಲದರೊಳಹಮನು ಕಾಣೆ ।
ಮಹನೀಯನಾತನೆಲೊ—ಮರುಳ ಮುನಿಯ ॥ ೬೧೮

ನೋವಿರದೆ ಸಾವು ದೈನ್ಯತೆಯುಳಿದ ಜೀವಿತವು ।
ದೈವಪದಸಾಯುಜ್ಯ ದೇಹ ಬಿಟ್ಟಂದು ॥
ಮೂವರಗಳಿವನು ವರಿಸಿದ ಪೂರ್ವಿಕರ್ ಸಾರೆ ।
ಕೋವಿದರ್ ಬೇಡಂತು—ಮರುಳ ಮುನಿಯ ॥ ೬೧೯

ಮಚ್ಚರಿಸಬೇಡ ಮಚ್ಚರವನಾಗಿಸಬೇಡ ।
ಕಿಚ್ಚದಂಟಲು ಸುಡುವುದಲ್ಲ ನಿನ್ನದನು ॥
ಹೆಚ್ಚು ಕೊರೆಯುವರವರ ಪೂರ್ವಕೃತ ತಾತ್ಕ್ಷಣಿಕ ।
ಉಚ್ಚವಿರಿಸಾತ್ಮವನು—ಮರುಳ ಮುನಿಯ ॥ ೬೨೦

ಗೊತ್ತಾದ ಕುರುಹು ಹೆಸರುಗಳಿಲ್ಲದಾ ಅಮಿತ ।
ವಸ್ತುವನು ನೀಂ ತಿಳಿಯುವೊಡೆ ದೃಢದಿ ನಿನ್ನ ॥
ಸೊತ್ತೆಂದು (ಪರಿ)ಗಣಿಸು (ಸು)ಜ್ಞಾನದಿಂದಲದು ।
ತತ್ತ್ವವಪ್ಪುದು ನಿನಗೆ—ಮರುಳ ಮುನಿಯ ॥ ೬೨೧

## ಉದ್ಧರೇದಾತ್ಮನಾತ್ಮಾನಂ

ಅನ್ಯರನು ನೀನುದ್ಧರಿಪ ಮಾತಹಂಕಾರ ।
ಮಣ್ಣು ಹುಳುವೇಂ ಗಜವ ಕುಳಿಯಿನೆತ್ತುವುದು ? ॥
ಪನ್ನಗಕೆ ಪೊರೆಕಳೆಯುವಿರಕುವೊಲು ಜಗ ನಿನಗೆ ।
ನಿನ್ನ ನೀನೆತ್ತಿಕೊಳೊ—ಮರುಳ ಮುನಿಯ ॥ ೬೨೨

ಕೇತಕಿ ಗುಲಾಬಿ ಪೊದೆಗಳ ಮೇಲೆ ಬಿದ್ದರಿವೆ–।
ಯಾತುರದಿ ಕೀಳೆ ಹರಿಯುವುದು ಚೂರಾಗಿ ॥
ಚೇತಸದ ಪಾಡಂತು ಜಗದ ಮುಳ್ಗಳಿನದನು ।
ಸೈತರಿತು ಬಿಡಿಸಿಕೊಳೊ—ಮರುಳ ಮುನಿಯ ॥ ೬೨೩

ಮೂಕಹೃಚ್ಛೂಲೆಗಳನರಿಯಲಾರದ ಸಖರು ।
ಲೌಕಿಕದ ನಯಗಳಲಿ ಮನವ ಮರೆಯುವರು ॥
ಸಾಕು ನಿನ್ನೊಳಗನರಸದ ಜನರ ಸಹವಾಸ ।
ಏಕಾಕಿ ನೀನಿರೆಲೊ—ಮರುಳ ಮುನಿಯ ॥ ೬೨೪

ಎಡಕೆ ತಿರುಗಲಿ ಬೇಡ ಬಲಕೆ ತಿರುಗಲಿ ಬೇಡ ।
ಒಡನಾಡಿಯೆತ್ತಲೆಂದುಸಿರೆತ್ತ ಬೇಡ ॥
ನಡೆ ನಿನ್ನ ಪಾಡ ನೀನಡರಲೊಮ್ಮತಿಯಿಂದೆ ।
ಬಿಡುಗಡೆಯೊ ಒರ್ತನದಿ—ಮರುಳ ಮುನಿಯ ॥ ೬೨೫

ಒರ್ವನೇ ಧರ್ಮಯಾತ್ರೆಯ ಚರಿಸೆ ಸಿದ್ಧನಿರು ।
ಖರ್ವಪಾದಗಳಿರಲಿ ಗುರಿ ದೂರವಿರಲಿ ॥
ಸರ್ವರುಂ ತೊರೆದಿರಲಿ ಶರ್ವರಿಯು ಕಾಳಿರಲಿ ।
ನಿರ್ವಂಚನೆಯೊ ಮುಖ್ಯ—ಮರುಳ ಮುನಿಯ ॥ ೬ ೬

ನಿನಗೊದಗಿದ ಪ್ರಶ್ನೆಗಳ ನೀನೆ ಪರಿಸಿಕೊಳೊ ।
ಎನಿತುದಿನವವರಿವರನವಲಂಬಿಸಿರುವೆ ? ॥
ಹೆಣ ಹೊರೆಯುವರವರಿಗವರವರೆ ಹೊರುವನಿತು ।
ನಿನಗೆ ನೀನೇ ಗತಿಯೋ—ಮರುಳ ಮುನಿಯ ॥ ೬೨೭

ಅಹಿತಹಿತಗಳ ಮೂಲವಿಹುದಹಂಭಾವದಲಿ ।
ಅಹಮೆಂಬುದೆಲ್ಲಕಂ ಬೆಲೆಯ ಕಟ್ಟುವುದು ॥
ಬಹುವಿಧದ ರುಚಿಗಳನು ತೋರಿ ಕರೆಯಲ್ ಪ್ರಕೃತಿ ।
ಸ್ವಹಿತ ನಿಶ್ಚಯ ನಿನದು—ಮರುಳ ಮುನಿಯ ॥ ೬೨೮

ಲೋಕಕ್ಕೆ ಬಿಡುವಿಲ್ಲ ನಿನ್ನ ಚಿಂತಿಸುತಿರಲು ।
ಶೋಕಂಗಳದಕಮಿಹುವಂತು ನಿನಗೆಂತೋ ॥
ವ್ಯಾಕುಲಿಸದಿರದಾರುಮಾದರಿಪರಿಲ್ಲೆಂದು ।
ಏಕಾಂತ ಶವವಾಹಿ—ಮರುಳ ಮುನಿಯ ॥ ೬೨೯

ಆಶೆಗಳ ಕೆರಳಿಪುದು ತೋಷಗಳನುಣಿಸುವುದು ।
ನಾಶ ಭಯಗಳಿನೆದೆಯ ಕಾಡಿ ಕುಗ್ಗಿಪುದು ॥
ಈ ಸೇನೆ ನಿನ್ನ ಸ್ವತ್ತ್ವನುತಿಹುದು ದೈವಕೃತಿ ।
ಲೇಸು ನಿನ್ನೊಳು ನೀನು—ಮರುಳು ಮುನಿಯ ॥ ೬೩೦

ಪ್ರಕೃತಿಯನು ತಿಳಿ ; ತಿಳಿವಿನಿಂ ಪ್ರಕೃತಿಯನು ದಾಟು ।
ವಿಕೃತಿಗೆಯ್ದುವ ಜಗದಿ ಸಂಸ್ಕೃತಿಯ ಗಳಿಸು ॥
ಸುಕೃತ ಧರ್ಮಂ ಪ್ರಾಕೃತ ದ್ವಂದ್ವಗಳ ಮೀರೆ ।
ಸ್ವಕೃತವೋ ಸ್ವಾತ್ಮಗತಿ—ಮರುಳ ಮುನಿಯ ॥ ೬೩೧

## ನಿದ್ರಿಸದೆ ಪಾರಾಗು

ಕಾರುಮುಗಿಲೊಡ್ಡಿನೊಮೊಮ್ಮೊಮ್ಮೆ ತೆರಪುಂಟು ।
ಕಾರಾಗೃಹದೊಳಂ ಗವಾಕ್ಷಿಯೊಂದುಂಟು ॥
ಪ್ರಾರಬ್ಧಮುಂ ದೈವಮುಂ ಬಿಡುವು ಕೊಟ್ಟಂದು ।
ಪಾರಾಗು ನಿದ್ರಿಸದೆ—ಮರುಳ ಮುನಿಯ ॥ ೬೩೨

ಮನುಜನೆಲ್ಲ ಕಲಾಚಮತ್ಕೃತಿಗಳಂ ಪ್ರಕೃತಿ- ।
ಯನುಕರಣಮವನ ಸಾಮಗ್ರಿಯವಳಿತ್ತ ॥
ಋಣಮಾತ್ರವಂತಿರೆಯುಮವಳಪ್ರತಣದ ಮತ್ತ ।
ನಣಗಿಪೌಷಧ ನಿನದು—ಮರುಳ ಮುನಿಯ ॥ ೬೩೩

ಕಚ್ಚವೇಂ ನಿನ್ನ ಪಲ್ಗಳೆ ನಿನ್ನ ನಾಲಗೆಯ ? ।
ಚುಚ್ಚದೇಂ ನಿನ್ನ ಕಣ್ಣನೆ ನಿನ್ನ ಬೆರಲು ? ॥
ಕಿಚ್ಚಹುದು ನಿನ್ನ ಭಾವ್ಯಕೆ ನಿನ್ನ ಪೂರ್ವಿಕವ ।
ಎಚ್ಚರಿರೆ ನಿನಗುಳಿವು—ಮರುಳ ಮುನಿಯ ॥ ೬೩೪

ನಡೆಗೆ ನಡೆವಂತೆ ಲೋಗರ್ ಪ್ರಕೃತಿ ಚೋದಿತದಿ ।
ಹುಡುಗಾಟ ಕುಡಕಾಟ ಮುಡುಕಾಟಗಳಲಿ ॥
ಸಿಡುಕೇಕೆ ? ಬರಿಯಾಟವೆಂದು ನೀನದನರಿತು ।
ಬಿಡಿನಿಲ್ಲು ನಿನ್ನೊಳಗೆ—ಮರುಳ ಮುನಿಯ ॥ ೬೩೫

ಶಿವನೀವ ವರಗಳತಿ ವಿವಿಧ ನೀನೆಚ್ಚರಿರು ।
ನವಮಲ್ಲಿಗೆಯ ನಡುವೆ ನಾಗರಿದ್ದೀತು ॥
ಸವಿಯಿನಮಲಾಗಿಪನು ಕಹಿಯಿಟ್ಟು ಪರಿಕಿಪನು ।
ಅವನ ನೆನೆದೂಟವುಣು—ಮರುಳ ಮುನಿಯ ॥ ೬೩೬

ಬೆತ್ತಲೆಯೆ ನೀಂ ಬಂದೆ ಬೆತ್ತಲೆಯೆ ನೀಂ ಪೋಪೆ ।
ವಸ್ತ್ರವೇಷಗಳೆಲ್ಲ ನಡುವೆ ನಾಲ್ಕು ದಿನ ॥
ಚಟ್ಟಕ್ಕೆ ನಿನ್ನನೇರಿಪ ಮುನ್ನ ನೀನಾಗಿ ।
ಕಿತ್ತೆಸೆಯೊ ಕಂತೆಗಳ—ಮರುಳ ಮುನಿಯ ೬೩೭

ನೆಚ್ಚದಿರು ದೈವವನು ಬೆಚ್ಚದಿರೆದಾರಿಗಂ ।
ಎಚ್ಚರಿರು ನಿನ್ನ ಸತ್ತ್ವದಲಿ ನೀಂ ನಿಂತು ॥
ಅಚ್ಚುಮೆಚ್ಚೇನಾದರಿರಲಿ ಲೋಕಕ್ಕೆ ಬಿಡು ।
ರಚ್ಚೆ ನೀನೇ ನಿನಗೆ—ಮರುಳ ಮುನಿಯ ॥ ೬೩೮

## ಸುಂದರದ ಮಾಯೆಯದು

ಒಂದರಿಂದೆರಡಹುದು ಲೋಕ ಲೀಲೆಗವಶ್ಯ ।
ಹೊಂದಿಕೆಯಿನಿರದೆರಡರಿಂದಹುದನರ್ಥ ॥
ಅಂದವದು ಕಣ್ಗೆ ಕೈಗಂದದೆಯೆ ಹಾರುವುದು ।
ಸುಂದರದ ಮಾಯೆಯದು—ಮರುಳ ಮುನಿಯ ॥ ೬೩೯

ದಿನದಂತೆ ದಿನವಿಲ್ಲ ಮನದಂತೆ ಮನವಿಲ್ಲ।
ಜನಜನವು ಚಣ ಚಣವು ನವನವ್ಯಸೃಷ್ಟಿ॥
ಗುಣರುಚಿಗೆ ಮುಪ್ಪಿಲ್ಲವನುಭವಕೆ ಮಿತಿಯಿಲ್ಲ।
ಅನವರತ ಚಲಿತ ಜಗ—ಮರುಳ ಮುನಿಯ॥ ೬೪೦

ಸ್ತ್ರೀ ಪುರುಷ ಭೇದ ನೋಡು ಪರಸ್ಪರೋದ್ರೇಕಿ।
ರೂಪಗುಣ ವಿವಿಧತೆಯಿನನ್ಯೋನ್ಯ ವಾಂಛೆ॥
ಸಂಪೂರ್ಣವಹುದೊಂದು ಜೀವವಿನ್ನೊಂದೊದವೆ।
ತಾಪವಂತೊದವದಿರೆ—ಮರುಳ ಮುನಿಯ॥ ೬೪೧

ಶ್ರಾವಿಯುಂ ಗಾಯಕನುಮೊಡವೆರೆತು ಸಂಗೀತ।
ಭಾವದ ಸಮಾಧಿಯೊಳಗೈಕ್ಯವಡೆವಂತೆ॥
ಜೀವವಿಶ್ವಗಳು ತತ್ತ್ವದ ನೆಲೆಯೊಳೊಂದಹುದು।
ದೈವಪ್ರಸಾದವೆಲೊ—ಮರುಳ ಮುನಿಯ॥ ೬೪೨

ಜೀವ ಜೀವಮುವೊಂದು ಕೃಕಲಾಸ ಚಲವರ್ಣ।
ಭೂವಿಯುದ್ವ್ಯಾಮರ್ದ ವಿಕೃತ ಮಧ್ಯಚರಿ॥
ಜೀವ ಜೀವಕೆ ಭೇದವಂತು ಭೋಜನ ಭೇದ।
ವ್ಯಾವರ್ತಿಸಖಿಲದಿಂ—ಮರುಳ ಮುನಿಯ॥ ೬೪೩

ಜೀವನದ ವಿಸ್ತರಕೆ ಹೆಣ್ಣುಗಂಡಾವಶ್ಯ।
ಭೂವಿಲಾಸದೊಳಿರ್ವರಾತ್ಮ ತಾಂ ಬೆಳೆಗುಂ॥
ಭಾವದನ್ಯೋನ್ಯದಿಂ ಬೆಳೆವುದಾತ್ಮದ ರಾಜ್ಯ।
ಪಾವನವೊ ಜೀವಕ್ಕೆ—ಮರುಳ ಮುನಿಯ॥ ೬೪೪

ಹಾಸ್ಯ ರಸಿಕನೊ ದೇವನದರಿಂದಲಿಂತವನ ।
ವಿಶ್ವಮಾಗಿಹುದವನ ಕೃತಿಯುಕಟವಿಕಟಂ ॥
ಶಾಶ್ವತವದೇಕಿಂತಶಾಶ್ವತದ ರೂಪಿಂ ರ- ।
ಹಸ್ಯದೊಳ್ ಮರೆಯಿರದು—ಮರುಳ ಮುನಿಯಂ ॥ ೬೪೫

## ಮೀರು ಪ್ರಾರಬ್ಧವನು

ಪ್ರಾರಬ್ಧಕರ್ಮವೆಂದಾತ್ಮಘಾತನೆ ಬೇಡ ।
ಪ್ರಾರಬ್ಧಕಥೆಯಿರ್ಕೆ ಸುತ್ತ ಗತಿನೋಡು ॥
ಪೌರುಷಂ ನಿತ್ಯನವ ಸತ್ಯನವ ಚೈತನ್ಯ ।
ಮೀರು ಪ್ರಾರಬ್ಧವನು—ಮರುಳ ಮುನಿಯ ॥ ೬೪೬

ಅಕ್ಷಯ್ಯವದು ನೋಡು ಲೋಕದಿತಿಹಾಸದಲಿ ।
ಸಾಕ್ಷಿಗಳದೆಷ್ಟು ಜನರದರ ನಿತ್ಯತೆಗೆ ॥
ರಕ್ಷೆ-ಶಿಕ್ಷೆಗಳಿಂದ ಜೀವನವನುದ್ಧರಿಸೆ ।
ದೀಕ್ಷೆ ತೊಟ್ಟವರ ನೆನೆ—ಮರುಳ ಮುನಿಯ ೬೪೭

ನಿರವಧಿಯ ಕಾಲದಂಶವೆ ನಮ್ಮ ಘಟಿ ವಿಘಟಿ ।
ಪರಬೊಮ್ಮನೊಂದಂಶ ಜೀವವಾದಂತೆ ॥
ಧರೆಯುರೆಕ್ಷಣದ ಬಾಳಿಲೆ ಬರಿದದೆನ್ನದಿರು ।
ಕ್ಷರವೆ ಮುಖವಕ್ಷರಕೆ—ಮರುಳ ಮುನಿಯ ॥ ೬೪೮

ಜಗದ ಕಡಲಿನ ನಡುವೆ ನಗವಾಗಿ ನೀಂ ನಿಲ್ಲು ।
ನಗುವಹುದು ಸುತ್ತಲಿನ ತೆರೆಮೊರತವಂದು ॥
ಭಗವಂತನದು ಲೋಕ ನಮದವೊನೆ ಜನತೆ ।
ಹಗೆವರೆಂತವರಿವರು ?—ಮರುಳ ಮುನಿಯ ॥ ೬೪೯

ನರಕೃತ್ಯವೇಂ ನಶ್ಯ ಕಾಲವಶ್ಯವದೆಂಬ ।
ಕೊರಗಿಂದಲೆದೆ ಕುಗ್ಗಿ ಜೀವ ಕುಸಿವಂದು ॥
ಸ್ಫುರಿಸಾದಿಯಿಂ ಜಗದೊಳೆಡೆಬಿಡದೆ ಪರಿಯುತಿಹ ।
ಪುರುಷತಾವಾಹಿನಿಯು—ಮರುಳ ಮುನಿಯ ॥ ೬೫೦

ಪೌರುಷಪರೀಕ್ಷೆ ನಿತ್ಯದ ಕೃತ್ಯ ದೈವಕ್ಕೆ– ।
ದಾರನುಮದೆಂದುಮದು ಶೋಧಿಸದೆ ಬಿಡದು ॥
ದಾರುಣದಿನೋ ವಾರುಣಿಯಿನೋ ಎಂತೊ ಅದು ।
ಧೀರತೆಯ ಪರಿಕಿಪುದು—ಮರುಳ ಮುನಿಯ ॥ ೬೫೧

## ಕಲಿತಿದನು ಬಾಳ್

ನೆಲವರ್ಧ ಜಲವರ್ಧ ಸೇರಲೀ ಭೂಗೋಳ ।
ತಲೆಯರ್ಧವೆದೆಯರ್ಧ ಮನುಜ ಸಂಸಾರ ॥
ನಲಿವರ್ಧವಳಲರ್ಧ ಮನುಜ-ಜೀವಿತಸಾರ ।
ಕಲಿತಿದನು ಬಾಳಿಲವೊ—ಮರುಳ ಮುನಿಯ ॥ ೬೫೨

ಆವೊಂದು ವಸ್ತುವಂ ಪೂರ್ಣದಿಂ ತಿಳಿದಿರಲು ।
ಜೀವಿತದ ಮಿಕ್ಕೆಲ್ಲಮಂ ತಿಳಿಯಲಹುದೋ ॥
ಆ ವಿದ್ಯೆಯಂ ಗಳಿಸು ಮೊದಲೆಲ್ಲಕಿಂತಲದು ।
ದೀವಿಗೆಯೊ ಬಾಳಿರುಳ್ಗೆ—ಮರುಳ ಮುನಿಯ ॥ ೬೫೩

ಅಮನಸ್ಕನಾಗು ನೀಂ ಮಮತೆಯೆಲ್ಲವ ನೀಗು ।
ಭ್ರಮಣೆಯ ಪುರದ್ವಂದ್ವವೀಥಿಯಲಿ ಸಾಗು ॥
ಅಮಲ ಸತ್ತ್ವಾಂಬುಧಿಯ ವಿಮಲ ವೀಚೀತಲ– ।
ಸ್ತಿಮಿತ ಜಲದೊಡಲಲಿರು—ಮರುಳ ಮುನಿಯ ॥ ೬೫೪

ದೃತತೆಯುಂ ದೃಢತೆಯುಂ ಕೂಡೆ ರಥಪಯಣ ಸುಖ ।
ಹಿತವಂತು ಜನಕೆ ಲೋಕವ್ಯವಸ್ಥೆಯಲಿ ॥
ಜೊತೆಗೂಡೆ ಸಹಜ ವಿಕಸನೆ ಶಾಸನದ ನಿಯತಿ ।
ವಿತಮುಭಯಮಿರೆ ಧರ್ಮ—ಮರುಳ ಮುನಿಯ ॥ ೬೫೫

ಎನ್ನ ಹಣವೆನ್ನ ಹೆಸರೆನ್ನ ಮನೆಯೆನ್ನ ಜನ- ।
ವೆನ್ನುತ್ತಲನ್ಯರದು ಬೇರಿಹುದೆನುತ್ತೆ ॥
ಭಿನ್ನಗೊಳಿಸಿಬ್ಭಾಗ ಲೋಕವನು ಮಾಡುವುದು ।
ಪುಣ್ಯಪದವಲ್ಲವದು—ಮರುಳ ಮುನಿಯ ॥ ೬೫೬

ತಿನ್ನಲೊಳಿತೆನೆ ರಸನೆಯದು ಕುಕ್ಷಿಗೊಳಿತಹುದೆ ? ।
ಕಣ್ಣೊಳಿತೆನುವುದೆಲ್ಲ ಹೃದಯಕೊಳಿತಹುದೇಂ ? ॥
ಅನ್ನಭೋಗಗಳಳಿಸದಾಶೆಯುಮದೊಂದಿಹುದು ।
ನಿನ್ನೊಳರಹಸ್ಯವದು—ಮರುಳ ಮುನಿಯ ॥ ೬೫೭

## ಆಸೆಗೆ ಮಿತಿಯಿಲ್ಲ

ಧಾನ್ಯವುಂಡಿಹ ಹೊಟ್ಟೆ ತುಂಬಿ ತೇಗುವುದೊಡನೆ ।
ನಾಣ್ಯಸಂಚಿಕೆಗಂತು ತಣಿವಪ್ಪುದುಂಟೆ ? ॥
ಪಣ್ಯವಾಗಿಸಿತೆಲ್ಲ ಮನುಜ ಬಂಧುತೆಯ ಹಣ ।
ಸನ್ನಿಯದು ಕಲಿದೊರೆಗೆ—ಮರುಳ ಮುನಿಯ ॥ ೬೫೮

ಪಾಳು ಬಾವಿಗೆ ಬಿದ್ದು ಪುಲಿಯಂಜಿಕೆಯಿನೆಗರಿ ।
ವ್ಯಾಳಕೆಳಗಿರೆ ಒದಿಯ ತಬ್ಬಿ ನಡುಗುವವಂ ॥
ಮೇಲಣೆಂದುದುರಿದರಲಿನ ರಸಕೆ ಬಾಯೊಡ್ಡೆ ।
ಬಾಳರಿತ ಯೋಗಮದು—ಮರುಳ ಮುನಿಯ ॥ ೬೫೯

ಗಿಡದಿ ಹೂ ನಗುತಲಿರೆ ನೋಡಿ ನಲಿವನು ಜಾಣ ।
ಗುಡಿಗದನು ಕೊಂಡೊಯ್ವೆನೆನ್ನುವನು ಭಕುತ ॥
ಮಡದಿ ಮಕ್ಕಳ ಮುಡಿಗದೆನ್ನುವನು ಸಂಸಾರಿ ।
ಸಡಲದೆದೆಯುವನಾರು ?—ಮರುಳ ಮುನಿಯ ॥ ೭೬೦

ಮುಗಿಲಿಂದಿಳಿದು ನೆಲವನಿನ್ನುಮಾನದಿಹ ಪನಿ ।
ಸೊಗ ಕುಡಿಯುಲಿಕೆ ಕೆರೆಗಳೇತಕೆನ್ನುವನಾರ್ ? ॥
ಅಗುಣ ಅಶರೀರ ಸತ್ತ್ವವ ನಿನಗೆ ಪಿಡಿದೀಯೆ ।
ಸಗುಣಾಕೃತಿಯೆ ಘಟವೊ—ಮರುಳ ಮುನಿಯ ॥ ೭೬೧

## ಮೂಡಿದ್ದುಣ್ಣೋ ಮಹಾರಾಯ

ಪ್ರಾರಬ್ಧವಾಸನಾ ಋಣ ಗುಣೋತ್ಕರವೊಂದು ।
ಪೌರುಷದ ಸಾಂಪ್ರತ ವಿವೇಕವೊಂದಿಂತು ॥
ಹೋರುತಿದೆ ನರನೆರಡು ಪಕ್ಷಗಳ್ ನ್ಯಾಯಮಂ ।
ತೀರುಗೊಳಿಪಂ ಸ್ವಾಮಿ—ಮರುಳ ಮುನಿಯ ॥ ೭೬೨

ಋಣವ ತೀರಿಸಬೇಕು, ಋಣವ ತೀರಿಸಬೇಕು ।
ಋಣವ ತೀರಿಸಿ ಜಗತ್ಪ್ರಕೃತಿ ಲೇಖ್ಯದಲಿ ॥
ಋಣ ಮತ್ತೆ ಬೆಳೆಯದವೊಲಿರುತ್ತಲಿ ಪುರಾಕೃತದ ।
ಹಣವ ಸಾಗಿಸಬೇಕೋ—ಮರುಳ ಮುನಿಯ ॥ ೭೬೩

ಜನನಿ ತನಯಂನನೆತ್ತಿಕೊಂಡಿರಲ್ ಬಿಸಿಯೊತ್ತು ।
ತನುವೊಂದಕಿನ್ನೊಂದರಿಂ ಪರಿವ ತೆರದಿ ॥
ಮನುಜನೊಳು ಹಸಿವನಾಗಿಸೆ ಸೃಷ್ಟಿಯುವನವಳ ।
ಋಣವುಂಡು ಬೆಳೆಯುವನೊ—ಮರುಳ ಮುನಿಯ ॥ ೭೬೪

ಕರ್ಮಗಳನನುಕ್ಷಣಮುಮೆಸಗದಿಹನಾರಯ್ಯ ।
ಕರ್ಮಗಳ್ ತನಗಾಗಿ ನೈಜದಿಂ ತಾನೆ ॥
ಉಣ್ಣಿಪ್ಪವದು ಫಲವ ಶೇಷಮುಂ ಭುಜಿಸಲ್ಕೆ ।
ಜನ್ಮಾಂತರದ ವಿಧಿಯೊ—ಮರುಳ ಮುನಿಯ ॥ ೬೬೫

ಅಡವಿಯನುಂ ಕಡಿಯುವನು ಬೆಟ್ಟಗಳನಿಡಿಯುವನಂ ।
ಪೊಡವಿಯನುಂ ಪಾತಾಳ ಮುಟ್ಟೆ ಕೊರೆಯುವನು ॥
ಕಡಲುಗಳ ಹಾಯುವನು ಉಡುಪಥವ ಸೀಳುವನಂ ।
ದುಡುಕನೇ ಸೃಷ್ಟಿಯೆಡೆ—ಮರುಳ ಮುನಿಯ ॥ ೬೬೬

ಕೈಯಂ ದುಡುಕಿಸಬೇಡ ಜೀವಪರಿಸರಗಳಲಿ ।
ಗಾಯಂ ಮಾಯದು ಬೆರಲು ತಗಲುತಿರಲದಕೆ ॥
ಕಾಯಿ ಮಾಗದು ಹುಲ್ಲೊಳದನು ಬಿಡದವುಕುತಿರೆ ।
ಸ್ವಾಯತ್ತೆಯಿಂದಾತ್ಮ—ಮರುಳ ಮುನಿಯ ॥ ೬೬೭

## ಮನುಷ್ಯಜನ್ಮ ದೊಡ್ಡದು

ಪ್ರಾಣಿಪ್ರಪಂಚಕ್ಕೆ ಮಾನವಂ ಮಕುಟಮಣಿ ।
ಜ್ಞಾನದಿಂ ಮಾನ ತರತಮ ನಯವಿನಯದಿಂ ॥
ಮಾನವತ್ವದ ಬೆಲೆಯೆ ಲೋಕಕೆಲ್ಲಾ ಬೆಲೆಯುಂ ।
ಮಾನವತೆಯನು ಗಣಿಸು—ಮರುಳ ಮುನಿಯ ॥ ೬೬೮

ನರಚರಿತೆಯೆಡೆಬಿಡದ ವಿಜಯ ಸಾಹಸದ ಕಥೆ ।
ವರದಶೆಯಂ ತಾನೊಂದನೆಳಸಿ ಬಿಡದರಸಿ ॥
ಪರಿಯುವುದು ತಲೆಯಿಂದ ತಲೆಗೆ ಯುಗದಿಂ ಯುಗಕೆ ।
ಪುರುಷಸತ್ತ್ವದ ಲಹರಿ—ಮರುಳ ಮುನಿಯ ॥ ೬೬೯

ಪುರುಷಸತ್ತ್ವದ ವಿಜಯರಥ ಸಾಗಿ ಬರುತಿಹುದು ।
ಭರದಿನೊಮ್ಮೊಮ್ಮೆ ಮಂಥರದಿನೊಮ್ಮೊಮ್ಮೆ ॥
ಸರಲ ಮಾರ್ಗದೊಳೊಮ್ಮೆ ದುರ್ಗವಕ್ರದೊಳಮ್ಮೆ ।
ಪರಿಪರಿಯ ಯಾತ್ರೆಯದು—ಮರುಳ ಮುನಿಯ ॥ ೬೭೦

ಜ್ಞಾನವಿಜ್ಞಾನದಲಿ ಗೃಹರಾಷ್ಟ್ರಸಂಸ್ಥೆಯಲಿ ।
ಗಾನ ನರ್ತನ ಕಾವ್ಯಚಿತ್ರಕಲೆಗಳಲಿ ॥
ಯಾನಯಂತ್ರಂಗಳಲಿ ವೈದ್ಯತಂತ್ರಂಗಳಲಿ ।
ಮಾನವ ಪ್ರಗತಿಯೆಲೊ—ಮರುಳ ಮುನಿಯ ॥ ೬೭೧

ಸುರತೆ ಮೃಗತೆಗಳ ಮಿಶ್ರಣದಿಂದೆ ನರಜಂತು ।
ಪುರುಷತ್ವ ಪೆರ್ಚುವುದು ಮೃಗತೆಯಳಿದಂತೆ ॥
ಪರಿಪೂರ್ಣದೈವ ಹರಿ ಪುರುಷೋತ್ತಮನಂತೆ ।
ಪರಿಶುದ್ಧಸತ್ತ್ವವದು—ಮರುಳ ಮುನಿಯ ॥ ೬೭೨

ನಾರಸತ್ತ್ವಾಯನಂ ನಾರಾಯಣಂ ಬಗೆಯೆ ।
ಪೌರುಷಪರಾಕಷ್ಠಪದವೆ ಆ ದೈವಂ ॥
ದಾರುತೆಯ ಕಳೆದ ಮಂದಾರಸುಮಸುರಭಿಯದು ।
ಪಾರಮಾರ್ಥಿಕ ಜೀವ—ಮರುಳ ಮುನಿಯ ॥ ೬೭೩

ವಸ್ತು ಸತ್ತ್ವದ ಕಾವು ಗಟ್ಟಿಯೊಡಲೊಳಗೆನುತೆ ।
ಹಸ್ತಿಯನು ತುಂಡಾಗ್ರವಿರದೆ ಮೆಚ್ಚುವರೆ ? ॥
ಕಸ್ತೂರಿಕಾಮೃಗದೊಳಗ್ಗಳದ ಪುರುಳೆಲ್ಲಿ ? ।
ವ್ಯಕ್ತಿತೆಯ ನೆಲೆ ಸೂಕ್ಷ್ಮ—ಮರುಳ ಮುನಿಯ ॥ ೬೭೪

ಬಾಲದೊಳೊ ಬೆನ್ನಿನೊಳೊ ಕಣ್ಗಿದ್ದು ಕಾಣದೆಡೆ ।
ತೋಳಿನೊಳೊ ತೊಂಡಿಲೊಳೊ ಮೆಯ್ಯಮುದುರಿನೊಳೊ ॥
ಜಾಲಾಗಿ ಜುಂಗಾಗಿ ಸಿಗುರಾಗಿ ಸುಳಿಯಾಗಿ ।
ಬಾಳ ತೆನೆಯಿದ್ದೀತೊ—ಮರುಳ ಮುನಿಯ ॥ ೬೭೫

ಕ್ಷರ ಜಗತ್ತಿನೊಳಕ್ಷಯದ ವಾಸನೆಯ ಕಾಣ್ಬ ।
ವಿರಸ ಮಧ್ಯದಿ ಸರಸ ಸಿರಿಯನಾಶಿಸುವಾ ॥
ವರವದಾರ್ಗುಂಟು ಸೃಷ್ಟಿಯ ಜಂತು ವರ್ಗದಲಿ ।
ನರಜಾತಿಯೊಂದುಳಿದು—ಮರುಳ ಮುನಿಯ ॥ ೬೭೬

ಯಾತನೆಯು ರಂಗ ನರಜನ್ಮವೆನ್ನಿಪುದು ದಿಟ ।
ನೀತಿಯಿನದುದ್ಧಾರ್ಯಮೆಂಬುದುಂ ದಿಟವೇ ॥
ಭೀತಿಯಿನಭೀತತೆಗೆ ಮೃತ್ಯುವಿನಮರ್ತ್ಯತೆಗೆ ।
ಸೇತು ಪೂರುಷಜನ್ಮ—ಮರುಳ ಮುನಿಯ ॥ ೬೭೭

## ಕಷ್ಟವೇಂ ಬಾಳಲಿಕೆ ?

ಹೊಟ್ಟೆಪಾಡಿನ ದುಡಿಮೆ ಸೃಷ್ಟೀಶಪದದೊಲುಮೆ ।
ಇಷ್ಟ ಬಾಂಧವ ಮಿತ್ರ ಲೋಕಗಳ ಗೆಯ್ಮೆ ॥
ಇಷ್ಟ ಸಂಗಾತಿ ಜನ ಕಾವ್ಯ ಗೀತಗಳಿರಲು ।
ಕಷ್ಟವೇಂ ಬಾಳಲಿಕೆ ?—ಮರುಳ ಮುನಿಯ ॥ ೬೭೮

ಮಡುವು ಮಾನವ ಲೋಕ ಮಾಯೆಯಾ ಜಲರಾಶಿ ।
ತಡೆ ಕಣ್ಗೆ ಮೋಹ ಭಯ ರೋಷಗಳ ಹೊಡೆತ ॥
ದುಡುಕುತಾಯತಬಟ್ಟು ಮಡುವೊಳೀಜುವನವನು ।
ದಡವೇರೆ ಪರಮಸುಖಿ—ಮರುಳ ಮುನಿಯ ॥ ೬೭೯

ಕೃಪಣೆಯೋ ಸೃಷ್ಟಿಯುವಳೊಂದನುಂ ವ್ಯರ್ಥಿಸಳು ।
ಉಪಯೋಗಗೈವಳೆಲ್ಲರನುಮೆಲ್ಲವನುಂ ॥
ಅಪರಿಮಿತ ಜೀವನಸಮೃದ್ಧಿಯುವಳಾಕಾಂಕ್ಷೆ ।
ಸಫಲವದಕಾದ ಬಾಳ್—ಮರುಳ ಮುನಿಯ ॥ ೭೮೦

ಆವುದಾನುಂ ನಿನ್ನ ಬಾಳಬಲಿಗೊಳಲಿಹುದೆ ।
ದೈವವೋ ಧರ್ಮವೋ ಸಖ್ಯವೋ ಸುಖವೋ ॥
ಜೀವವೆಲ್ಲವ ತನ್ನೊಳಕೆ ಕೊಳುವ ಲಕ್ಷ್ಯವೊಂ- ।
ದಾವರಿಸೆ ನೀಂ ಧನ್ಯ—ಮರುಳ ಮುನಿಯ ॥ ೭೮೧

ಹೊಟ್ಟೆಪಾಡಿಗೆ (ಸತ್ಯಮಾರ್ಗದಪ್ಪದ) ದುಡಿಮೆ ।
ನಿಷ್ಠೆಯಿಂದಿಹ ಗೆಳತಿ ಕಷ್ಟ (ದಿನಗಳಿಗೆ) ॥
ಸೃಷ್ಟೀಶಭಕ್ತಿ—ಈ ಮೂರಿರಲ್ ಜೀವನದಿ ।
ಕಷ್ಟವೇನಿಹುದಯ್ಯ ?—ಮರುಳ ಮುನಿಯ ॥ ೭೮೨

ಮಡುವೀಜುವಾಟದಲಿ ಶ್ರೀಕೃಷ್ಣಗೋಪಿಯರು ।
ದಡದಿಂದ ಧುಮ್ಮಿಕ್ಕಿ ತಡಕಾಡಿ ದಣಿದು ॥
ಕಡೆಗೆ ದಡವೇರುತ್ತ ಕಿಲಕಿಲನೆ ನಗುವಂತೆ ।
ಪೊಡವಿಯೊಳು ನರನೀಜು—ಮರುಳ ಮುನಿಯ ॥ ೭೮೩

ವರ್ತಮಾನದಿ ತೃಪ್ತಿಯೊಡನುತ್ತಮತೆಯಾಶೆ ।
ಚಿತ್ತದ ಸಮಾಧಾನ ಹಸ್ತದುದ್ಯೋಗ ॥
ಕರ್ತವ್ಯಕಿಂತಂ ಕಾವಡೆಯು ತೆರದಿಬ್ಬಾರೆ ।
ಯಾತ್ರೆಯಂದರಿಂ ಪೂರ್ಣ—ಮರುಳ ಮುನಿಯ ॥ ೭೮೪

## ಇದು ಸ್ವಾತಂತ್ರ್ಯ

ಪ್ರಾತರನಿಲಂ ಸುಳಿಯೆ ನೂತನಾರುಣನೊಲಿಯೆ ।
ಪ್ರೀತಿಮೆರೆದರಳುತಿಹ ನನಗೆ ಮರೆದಲೆಯಿಂ ॥
ಆತಂಕ ತಾಕದಿರಲಾ ಆತ್ಮವಿಕಸನವು ।
ಸ್ವಾತಂತ್ರ್ಯದುಪಯೋಗ—ಮರುಳ ಮುನಿಯ ॥ ೬೮೫

ಗೀತರಾಗಂ ನಾದಮಾನದಿಂ ರುಚಿಪಂತೆ ।
ಮಾತು ಛಂದಸು ಕೂಡಿ ಪದ್ಯವಪ್ಪಂತೆ ॥
ಸ್ರೋತಂ ತಟಾನುಗತಿಯಿಂ ಯೋಗ್ಯವೆನಿಪಂತೆ ।
ಸ್ವಾತಂತ್ರ್ಯ ಶಾಸ್ತ್ರಯಿಂ—ಮರುಳ ಮುನಿಯ ॥ ೬೮೬

ಹೆರರ ಬೆಳಕಿಗೆ ತನ್ನ ನೆರಳ ಬೀಳಲ್ಬಿಡದೆ ।
ಹೊರಿಸದಿನ್ನೊರ್ವಂಗೆ ತನಗಿರುವ ಹೊರೆಯ ॥
ಅರಿತು ತನ್ನೊಳಗನದರೊಳಿತ ಹೊರಕನುಗೊಳಿಪ ।
ಪರಿಯೆ ಸ್ವತಂತ್ರತೆಯೊ—ಮರುಳ ಮುನಿಯ ॥ ೬೮೭

ಆರು ತಾನರಿತನಿನ್ನೊರ್ವನೇಳ್ಗೆಯ ಬಗೆಯ ? ।
ಆರು ತನ್ನೇಳ್ಗೆಯನು ತಾನರಿತ ಕುಶಲಂ ? ॥
ಹೇರದಿರು ನಿನ್ನ ಕಣ್ಗಾಜನಿನ್ನೊರ್ವಂಗೆ ।
ದಾರಿಯುವನದವಂಗೆ—ಮರುಳ ಮುನಿಯ ॥ ೬೮೮

ಯುಗದಿಂದ ಯುಗಕೆ ಸಾಗಿದರು ಮುಗಿಯದು ಬಾಳು ।
ಜಗದ ಕುಣಿವೊಂದು ಚಣ ಮನುಜ ಜೀವನದಿ ॥
ನೆಗೆ ಸೂರ್ಯಮಂಡಲಕ್ಕೆರಗು ಭೂಮಂಡಲಕೆ ।
ಬಗೆ ನಿನಗೆ ನೀನೆ ದೊರೆ—ಮರುಳ ಮುನಿಯ ॥ ೬೮೯

## ಜೀವ – ಜೀವನ

ಜೀವನವ ಶುಚಿಯೆನಿಸು ಜೀವನವ ರುಚಿಯೆನಿಸು ।
ದೈವದೊಂದಂಶ ಸಂಪುಟವೊಂದು ಜೀವ ॥
ದೈವಪದಯೋಗ್ಯತೆಯು ಜೀವಿತಕೆ ಗಳಿಸಲದೆ ।
ಜೀವಜಯಸಂಪ್ರಾಪ್ತಿ—ಮರುಳ ಮುನಿಯ ॥ ೬೮೦

ಜೀವ ತಾಂ ಪ್ರತ್ಯಕ್ಷ ದೈವಾಂಶವಾಗಿರಲು ।
ಆವುದೋ ಶಾಸ್ತ್ರವಾಕ್ಯವನರಸಲೇಕೆ ? ॥
ಜೀವಪೋಷಣೆಗಲ್ತೆ ಮಿಕ್ಕೆಲ್ಲ ದೇವರುಂ ।
ಜೀವಿತವೆ ಪರತತ್ತ್ವ—ಮರುಳ ಮುನಿಯ ॥ ೬೮೧

ಒದುಕೆಲ್ಲಮುಂ ಜನಕೆ ವರ್ತಕ ವ್ಯಾಪಾರ ।
ಶ್ರಿದಿವದೊಡನೆಯುಮಿನಿತು ಮುಯ್ ಮುಯ್ಯ್ವದೇಕೆ ? ॥
ಮದುವೆಯೌತಣದೊಳುಂ ಮಳಿಗೆ ಲೆಕ್ಕಾಚಾರ ।
ಹೃದಯಜೀವನ ಶೂನ್ಯ—ಮರುಳ ಮುನಿಯ ॥ ೬೮೨

ಜೀವನವಿವರ್ಧನೆಯೆ ನಿತ್ಯದೆನ್ನುದ್ಯೋಗ ।
ಆವ ಕಾಣಿಕೆಯು ನೀನದಕೀವೆಯೆನುತೆ ॥
ಆವಗಂ ಕೇಳುತಿರುವಳ್ ಪ್ರಕೃತಿ ಶಿಶುಗಳನು ।
ಜೀವನೋದ್ಧೃತಿಗೊದಗೊ—ಮರುಳ ಮುನಿಯ ॥ ೬೮೩

ಗಾಳಿಗೋಪುರ ಸೊಗಸು ಗಾರೆ ಗೋಪುರಕಿಂತ ।
ತಾಳದೆ ಮನಃಶಿಲ್ಪ ಕಾಮರೂಪಗಳ ॥
ಏಳುವುದದೆಂತೊ ಬೀಳ್ವುದುಮಂತು ಆ ಚಿತ್ರ ।
ಬಾಳ್ವನಿತ ಕಟ್ಟಿಕೊಳೊ—ಮರುಳ ಮುನಿಯ ॥ ೬೮೪

ಕಾದ ಪಾತ್ರೆಯ ಸೋಕದಿಹ ಕಾಳು ಬಾಯ್ಗೆ ಕಸ ।
ಸೀದು ಬಿದ್ದಿಹ ಕಾಳು ಬೀದಿಗೆಲ್ಲ ಕಸ ॥
ಬೂದಿಯಾಗದೆ ಭವದೆ ಪಕ್ವವಾಗಿಹ ಜೀವ ।
ಸ್ವಾದು ರುಚಿಯೋ ಜಗಕೆ—ಮರುಳ ಮುನಿಯ ॥ ೬೯೫

ದೈವಪ್ರವಾದಿಗಳ ಸಂಸ್ಕರಣಚೋದಕರ ।
ಗೋವಿಂದ ಜಿನ ಬುದ್ಧ ಕ್ರಿಸ್ತ ಮಹಮದರ ॥
ಗೋಪುರಂಗಳೊಳಿರಿಸಿ ನಮಿಪೆವೆಂಬರು ಜನರು ।
ಜೀವನಕೆ ಸೋಕಿಸರು—ಮರುಳ ಮುನಿಯ ॥ ೬೯೬

ಹಳೆಯ ರೋಗದಿ ಹೊಸ ಚಿಕಿತ್ಸೆಯಿಂ ರುಜೆ ಹೊಸತು ।
ಒಳಿಗೆ ಮಾರ್ಪಡಿಸದಿರ್ಪುದೆ ಮದ್ದು ಮೈಯ ॥
ನೆಲನ ನೀ ಸೋಂಕಿದೊಡೆ ಮಣ್ ಪೊಸತು ಪೊಸತುಂ ಕೈ ।
ಮಿಲನವೇ ನವಸೃಷ್ಟಿ—ಮರುಳ ಮುನಿಯ ॥ ೬೯೭

ಆವುದರೊಳಿರ್ಪೊಳಿತ ಬೆಳಸೆ ದೇವತ್ವವೊ ಆ–।
ದಾವುದನು ಕುರುಡು ಕೈ ಕೆಡಪೆ ಕೃಪಣತೆಯೋ ॥
ಆವುದೀ ಸೃಷ್ಟಿವೃಕ್ಷದ ಫುಲ್ಲಸುಮವೊ ಆ ।
ಜೀವನಕೆ ನಮೊ ಎನ್ನೊ—ಮರುಳ ಮುನಿಯ ॥ ೬೯೮

ಆವುದೆಲ್ಲರೊಳಮಾನ್ ನಾನು ನಾನೆನುತಿಹುದೊ ।
ಆವುದಾದಿಯೊ ಜಗದ್ವಸ್ತುಗಣನೆಯಲಿ ॥
ಆವುದಿರದೊಡೆ ದೇವರೆನುವ ಪೆಸರಿರದೊ ಆ ।
ಜೀವಕ್ಕೆ ನಮೊ ಎನ್ನೊ—ಮರುಳ ಮುನಿಯ ॥ ೬೯೯

## ಸಮನ್ವಯದಿಂದ ಹಿತ

ಶ್ರುತಿಮತಿಗಳೆರಡುಮಂ (ದೃಢ) ಸಮನ್ವಯಗೊಳಿಸಿ।
ರತಿವಿರತಿಗಳುಭಯ ಸಮನ್ವಯವನರಿತು॥
ಸ್ವತೆಪರತೆಗಳನೆರಡನುಂ ಸಮನ್ವಯಗೊಳಿಸಿ।
ವಿತತಗತಿಯೆ ಹಿತಯೋಗ—ಮರುಳ ಮುನಿಯ॥ ೭೦೦

ಬಿಸಿ ಬಿಸಿಯು ನೀರಿಂಗೆ ಹಿಮಗಿರಿಯ ತಣ್ಣೀರೆ।
ಹಸಿಯ ತಣ್ಣೀರಿಂಗೆ ಬಿಸಿಯ ಸೇರಿಸುತೆ॥
ಹಸನು ಶೀತೋಷ್ಣದಿಂದೊಡಲ ಮಜ್ಜನಕ್ಕೈವ।
ಕುಶಲತೆ ಸಮನ್ವಯವೊ—ಮರುಳ ಮುನಿಯ॥ ೭೦೧

ಸವಿ ಬಾಯಿಗೊಪ್ಪುವುದು ಮತ ಮನಸಿಗೊಪ್ಪುವುದು।
ಅವರವರ ಶುಚಿ ರುಚಿಗಳವರವರ ದಾರಿ॥
ಬವರವೇತಕ್ಕಿಲ್ಲಿ ಶಿವಗುಡಿಯ ಮಾರ್ಗದಲಿ।
ವಿವಿಧ ಮನ ವಿವಿಧ ಮತ—ಮರುಳ ಮುನಿಯ॥ ೭೦೨

ಏಕತೆಗಮೆಡೆಯುಂಟನೇಕತೆಗಮೆಡೆಯುಂಟು।
ಲೋಕ ಜೀವನದ ಸುಖ ಶಾಂತಿ ಸಾಧನೆಯೊಳ್॥
ಕೈಕಾಲು ಬೇರ್ಬೇರೆ ಸೇವಿಪ್ಪ ಬಾಳೊಂದು।
ಸಾಕಲ್ಯ ದೃಷ್ಟಿ ಸರಿ—ಮರುಳ ಮುನಿಯ॥ ೭೦೩

ಎಡದಡಿಯನಿಡುವಂದು ಬಲದೆಡೆಯ ಮರೆಯದಿರು।
ಅಡಿಯ ಬಲಕಿಡುವಂದು ಮರೆಯಬೇಡೆಡವ॥
ನಡುದಾರಿ ನಡೆಯುತಂತೆರಡು ಕಡೆ ನೆನಪಿರಲಿ।
ದೃಢ ಸಮನ್ವಯ ಯೋಗ—ಮರುಳ ಮುನಿಯ॥ ೭೦೪

ಅಂಗಾಂಗದೊಂದು ಪರಿಮಾಣ ನಿಯತಿ ಸುರೂಪ ।
ಸಂಗೀತ ನಾದಲಯಗಳದೊಂದು ನಿಯತಿ ॥
ಸಂಘ ಜೀವಿತದಿ ಜನದೊಂದು ನಿಯತಿಯೆ ಧರ್ಮ ।
ಮಂಗಲವೊ ನಿಯತಿಯಿಂ—ಮರುಳ ಮುನಿಯ ॥ ೭೦೫

ಪ್ರಗತಿ ಸಂಸ್ಥಿತಿಗಳನ್ಯೋನ್ಯ ಮಿತಿಯಿಂ ಧರ್ಮ ।
ಜಗದ ರಥಸೌತ್ಯದಲಿ ಧರ್ಮ ಚತುರನಿರೆ ॥
ಲಗಿತವಾಗೆಯಿನಶ್ವವೇಗವಂ ನಿಯಮಿಸನೆ ।
ಸುಗಮಪಥ ಸಮಗತಿಗೆ—ಮರುಳ ಮುನಿಯ ॥ ೭೦೬

ತತ್ತ್ವ ಭಾಸ್ಕರ ದೀಪ್ತಿಯೆರಡೆಡೆಗೆ ಜೀವಕ್ಕೆ ।
ಮಸ್ತಕದ ಗಿರಿಶಿಖರದಲಿ ಶಾಸ್ತ್ರವೊಂದು ॥
ಹೃತ್ಸಾನುವೊಳ್ ಕಾವ್ಯ ನಿಂತು ಹಿತವೀರೆ ತಂಗಿ ।
ಮೃಚ್ಛಿಲೆಗೆ ಸಂಸ್ಕಾರ—ಮರುಳ ಮುನಿಯ ॥ ೭೦೭

ವಿಶದನಾಗು – ಲೀನನಾಗು

ವಿಶದನುಂ ಲೀನನುಂ ನೀನಾಗು ಲೋಕದಲಿ ।
ಕುಶಲಗುಣದಿಂ ವಿಶದ ಮೌನದಿಂ ಲೀನ ॥
ಹೆಸರಿಗೈಸಿರಿಗಾದ ಘಾಸಿಬೆಮರಿಂ ಲೋಕ– ।
ದುಸಿರ ನೀಂ ಕೆಡಿಸದಿರು—ಮರುಳ ಮುನಿಯ ॥ ೭೦೮

ಕುಸುಮ ಕಣ್ಮೂಗಿಂಗೆ ವಿಶದ ಕಸದೊಳು ಲೀನ ।
ವಿಶದ ರಸನೆಗೆ ಬೆಲ್ಲ ಕಬ್ಬಿನಲಿ ಲೀನ ॥
ಕುಶಲಗುಣದಿಂ ವಿಶದ ಜಗದ ಜೀವದಿ ಲೀನ ।
ಹೆಸರು ಬೇಡೊಳಿತಿರಲಿ—ಮರುಳ ಮುನಿಯ ॥ ೭೦೯

ಲೀನಮಾಗಿಹುದಂತು ವಿಶದಮೀ ಕನ್ನಡಂ ।
ಕ್ಷೋಣಿಯೊಳಗೆಂದನಾ ಸುಕವಿ ನೃಪತುಂಗಂ ॥
ನೀನುಮಂತು ವಿಲೀನ ವಿಶ್ವಜನಜೀವನದಿ ।
ದಾನದಿಂದಲೆ ವಿಶದ—ಮರುಳ ಮುನಿಯ ॥ ೭೧೦

ಅತಿಶಯದ ಮನ್ನಣೆಯ ಜಗದಿ ನೀಂ ಪಡೆಯುವೊಡೆ ।
ಮೃತನಾಗು ! ನಿನಗಂದು ಮಿತ್ರಬಂಧುಗಳು ॥
ಇತರರ್ಗೆ ತೋರದಾದರವನೆರೆವರು ಹೆಣಕೆ ।
ಕೃತಕೃತ್ಯವಲ್ತೆ ಶವ ?—ಮರುಳ ಮುನಿಯ ॥ ೭೧೧

## ಉತ್ತರ ಸುಲಭವಲ್ಲ

ಜಲಧಿಯಲೆವೊಲು ಬಾಳ್ವೆ ನಭದವೊಲು ಪರತತ್ತ್ವ ।
ಹಲವು ಹರಿಯದವು ನೀಂ ಕೇಳ್ವ ಕೇಳ್ಕೆಗಳು ॥
ಸುಲಭದಿಂ ನಿನಗುತ್ತರವನೊಂದು ಸಂಗ್ರಹದ ।
ಗುಳಿಗೆಯಲಿ ಕೊಡಲಹುದೆ ?—ಮರುಳ ಮುನಿಯ ॥ ೭೧೨

ಗಿಡದೊಳಿಹ ಹೂವ ಸತಿಮುಡಿಯಲೆಳಸುವನೊರ್ವ ।
ಗುಡಿಗದನು ಕೊಯ್ದೊಯ್ಯಲೆಳಸುವವನೊರ್ವ ॥
ಬಿಡುವನಿನ್ನೊರ್ವನದನಿರುವಡೆಯೆ ಕಂಡೊಲಿದು ।
ಬಿಡಿಸಿ ನೀಂ ಮೂಸುವೆಯ ?—ಮರುಳ ಮುನಿಯ ॥ ೭೧೩

ಸರ್ವಜ್ಞನಾಳುತಿರಲೇಕಿಂತು ಲೋಕದಲಿ ।
ದುರ್ವಾರ ದೋಷಗಳು ? ಧರ್ಮಲೋಪಗಳು ? ॥
ಸರ್ವಕಾರುಣಿಕಪ್ರಭುತ್ವದೊಳಗೇಕಿಂತು ।
ನಿರ್ವಿಣ್ಣತೆಯೊ ಜನಕೆ ?—ಮರುಳ ಮುನಿಯ ॥ ೭೧೪

ಮುಕ್ತಿ ಮುಕ್ತಿಯೆನುತ್ತಲೆಲ್ಲರುಂ ಜೀವಿತದ ।
ರಿಕ್ತಿಗಳ ತೊರೆದು ಯತಿವೃತ್ತಿಯಲಿ ಚರಿಸೆ ॥
ಶಕ್ತಿಗುಜ್ಜುಗವೆಲ್ಲಿ ? ಜೀವನಕೆ ರಸವೆಲ್ಲಿ ? ।
ರಿಕ್ತನಾಗನೆ ಬೊಮ್ಮ ?—ಮರುಳ ಮುನಿಯ ॥ ೭೧೫

ತತ್ತ್ವವೇನಾತ್ಮವೋ ಬ್ರಹ್ಮವೋ ಜೀವವೋ ? ।
ಬಿತ್ತೊ ಸಿಹಿತಿರುಳೊ ಮೇಲ್ ಸಿಪ್ಪೆಯೋ ಮಾವು ? ॥
ಕತ್ತರಿಯೊ ಬರಿ ತರ್ಕ, (ವಿಕಲ) ಸಕಲದೊಳಿಹುದೆ ? ।
ವಸ್ತು ಬಗೆಯಲಖಂಡ—ಮರುಳ ಮುನಿಯ ॥ ೭೧೬

ಪಾರವಿಲ್ಲದಿಹ ಚೈತನ್ಯರಾಶಿಯೊ ಜೀವ ।
ಬೇರಿನಾ ಬೇರ ನೀನೆಂತರಿವೆ ? ಕರಿದೆ ? ॥
ತಾರೆಯುಳಿವಣುವೊಡೆವ ಯಂತ್ರಗಳಿಗೆಟುಕದದು ।
ಆರರಿವರದರಿರವ—ಮರುಳ ಮುನಿಯ ॥ ೭೧೭

ಸತ್ಯವಾವುದು ಕಡಲ ನಡುವಣ ದ್ವೀಪದೊಂ- ।
ದೆತ್ತರದ ಗುಡಿಯ ಕಿಟಕಿಗಳಿಂದ ನೋಡೆ ॥
ಉತ್ತರವೊ ದಕ್ಷಿಣವೊ ಪೂರ್ವವೋ ಪಶ್ಚಿಮವೊ ।
ಎತ್ತ ಸತ್ಯದ ನೃತ್ಯ—ಮರುಳ ಮುನಿಯ ॥ ೭೧೮

ಸೃಷ್ಟಿಯೊಳು ದಂಡಾರ್ಹರಾರೆಂದು ಕೇಳಿದೊಡೆ ।
ಸೃಷ್ಟಿಕರ್ತನೆ ಮೊದಲ ದಂಡ್ಯನೆಂಬೆನು ನಾಂ ! ॥
ಸೊಟ್ಟನವನಿರಿಸಿಟ್ಟು ನೆಟ್ಟಗಿಸು ನೀನೆಂಬ ।
ಕಟ್ಟಲೆಯದೇಂ ನ್ಯಾಯ ?—ಮರುಳ ಮುನಿಯ ॥ ೭೧೯

## ಜಗಳವೇತಕೊ ತಮ್ಮ?

ಜಗಳವೇತಕೊ ತಮ್ಮ ನಿನಗೆನಗೆ ಸರ್ವರಿಗೆ ।
ಜಗದೊಳೆಡೆಯಿರಲಾಗಿ ಸೊಗದಿ ಬದುಕಲಿಕೆ ॥
ಅಗಲವಿದೆ ನೆಲ ನಾವು ಮನವನಿಕ್ಕಟಮಾಡಿ ।
ದುಗುಡಪಡುವುದು ಸರಿಯೆ ?—ಮರುಳ ಮುನಿಯ ॥ ೭೨೦

ಕೊಳದಿ ನಡುವೆಯಡೆಂತೊ ಸುಳಿಯೆದ್ದು ಬಳೆಯಾಗಿ ।
ವಲಯವಲಯಗಳಾಗುತಂಚು ಸೋಕುವವೊಲ್ ॥
ಕಳೆ ನಿನ್ನೆದೆಯೊಳೆದ್ದು ವಲಯವಲಯಗಳಾಗಿ ।
ಇಳೆಯೆಲ್ಲ ಸೋಕುವುದು—ಮರುಳ ಮುನಿಯ ॥ ೭೨೧

ಜಾತಿ ಮತ ಕುಲ ಭೇದ ಲೋಕ ಕಾರ್ಯದಿ ಗಣ್ಯ ।
ಪ್ರೀತಿನೀತಿಯಲಿ ಸುಖದುಃಖಭಯಗಳಲಿ ॥
ಜಾತರೆಲ್ಲರುಮೊಂದೆ ಭೇದಂಗಳೇನುಂಟು ।
ಆತುಮದ ಅನುಭವದಿ—ಮರುಳ ಮುನಿಯ ॥ ೭೨೨

ಇಂದೆಂಬುದೀಚಣವೊ ನಾವುಸಿರ್ವಷ್ಟು ದಿನ ।
ತಂದೆ ನಿನ್ನೆಯೊ (ಇಂದೊ) ನಾಳೆಯೇ ಮಗನೊ ॥
ಹಿಂದು-ಮುಂದುಗಳ ಮರೆತಿಂದು ಬಾಳ್ವುದು ಸರಿಯೆ ।
ಇಂದನಂತದ ಭಾಗ—ಮರುಳ ಮುನಿಯ ॥ ೭೨೩

ಶಿರದ ಮೇಲಣ ಬುತ್ತಿ ಹೊರೆ ದಾರಿ ನಡೆವಂಗೆ ।
ಅರಗಿದ ಬಳಿಕ್ಕದುವೆ ನವ ಪುಷ್ಟಿ ಶಕ್ತಿ ॥
ಹೊರಗೆ ಬೇರೆಯದೆನಿಪ ಜಪ ನಿನ್ನೊಳಗೆ ಕೂಡೆ ।
ಅರಿಯಾರು ನಿನಗಿನ್ನು ?—ಮರುಳ ಮುನಿಯ ॥ ೭೨೪

ಮಾತು ಮನಗಳ ಸೇತು, ಜ್ಯೋತಿ ಕಣ್ಗಳ ಸೇತು ।
ಪ್ರೀತಿ ಸೇತು ಪ್ರಿಯರ ಸವಿನೆನಸುಗಳಿಗೆ ॥
ಸೇತುವಾತ್ಮಕೆ ದೇವಮೂರ್ತಿ ಕೀರ್ತನೆ ಪೂಜೆ ।
ನೀತಿಗಾತ್ಮವೆ ಸೇತು—ಮರುಳ ಮುನಿಯ ॥ ೭೨೫

ಕಾಲನದಿ ಪರಿಯುತಿರೆ ನಡುವೆ ಶೀಲದ ಶೈಲ ।
ಗಾಳಿ ಬಿರುಬೀಸುತಿರಲಾತ್ಮಗಿರಿಯಚಲ ॥
ಹೋಳು ಹೋಳಾಗಿ ಜನ ಹಾಳಾಗುತಿರೆ ನೀನು ।
ಬಾಳು ತಾಳುಮೆ ಕಲಿತು—ಮರುಳ ಮುನಿಯ ॥ ೭೨೬

## ವಿಶ್ವಕುಟುಂಬ

ನೀನೊಬ್ಬ ಜಗದೊಳಗೆ, ನಿನ್ನೊಳಗದೊಂದು ಜಗ ।
ನೀನೆ ಜಗ, ನೀನಿರದೆ ಜಗವುಂಟೆ ನಿನಗೆ ? ॥
ತಾನೆ ಜಗವೆಲ್ಲವೆಂದರಿತಂಗೆ ಹಗೆಯೆಲ್ಲಿ ? ।
ಏನಿಹುದವಂಗನ್ಯ—ಮರುಳ ಮುನಿಯ ॥ ೭೨೭

ಬಹುಜೀವದೊಳಗೇಕ ಜೀವದ ವಿಲೀಕರಣ ।
ಬಹುತೆಯಿಂದೇಕತ್ವ ಏಕದಿಂ ಬಹುತೆ ॥
ಇಹದೊಳಿದು ಪರಮಾರ್ಥವಿದರಿಂದಲಾನಂದ ।
ಏಹಿತವಿದು ಮುಕ್ತಂಗೆ—ಮರುಳ ಮುನಿಯ ॥ ೭೨೮

ನಿನ್ನೊಳಗು ನಿನ್ನ ಹೊರಗೆರಡನುಮನರಿತು ನೀಂ ।
ಚೆನ್ನಾಗಿ ಹೊಂದಿಸಿಕೊ ಹೊಂದಿಕೆಯೆ ಚೆನ್ನ ॥
ಭಿನ್ನತ್ವ ತೋರದವೊಲಳವಡಿಸಿ ಬಾಳ್ದವನೆ ।
ಧನ್ಯನೀ ಸೃಷ್ಟಿಯಲಿ—ಮರುಳ ಮುನಿಯ ॥ ೭೨೯

ನಾನು ನಾನೆನ್ನುತಿಹನಾರು ? ನೀನೋರ್ವನೇಂ ? ।
ಲೀನರಲ್ಲವೆ ನಿನ್ನೊಳೆಲ್ಲ ಪೂರ್ವಿಕರು ? ॥
ಅನ್ನವಿಡುವರಿವೀವ ಬಾಳಿಸುವರೆಲ್ಲರುಂ ।
ಪ್ರಾಣದೊಳವೊಗದಿಹರೆ—ಮರುಳ ಮುನಿಯ ॥ ೭೩೦

ತಂದೆ ತಾಯ್ ಬಾಂಧವರನಾದಿಯಿಂ ಬಂದವರು ।
ಇಂದು ನಿನ್ನೆಡಬಲಂಗಳಲಿ ನಡೆವವರುಂ ॥
ಸಂಧಿಯೊಂದಿಹರು ನಿನ್ನೊಳು ಗೂಢ ನೀಂ (ದಿಟದಿ) ।
ಹಿಂದಿಂದುಗಳ ಕೂಸು—ಮರುಳ ಮುನಿಯ ॥ ೭೩೧

ಮಮತೆಯಾ ಬಿಂದುವಲೆಯಲೆಯಾಗಿ ಹರಡುತ್ತೆ ।
ರಮಣಿ ಗೃಹ ಕುಲ ದೇಶ ಭೂವಲಯಗಳಲಿ ॥
ಶ್ರಮದೆ ಪರಿಯುತೆ ಕಡೆಗೆ ವಿಶ್ವಪ್ರಪಂಚದಲಿ ।
ವಿಮಲ ಸುಖರಸವಕ್ಕು—ಮರುಳ ಮುನಿಯ ॥ ೭೩೨

ಬದುಕಲಧಿಕಾರವುಂಟೆಲ್ಲರಿಗಮಿಳೆಯೊಳಗೆ ।
ಮುಂದವ ಗಳಿಸಲುಮಾತ್ಮಸುಮವನರಳಿಸಲುಂ ॥
ವಿಧಿಯಶಾರ್ಗ್ಗಮುಂಬಳಿಯುನೀ ಧರೆಯೊಳಿತ್ತಿಲ್ಲ ।
ಸದರವೇನಲ್ಲವನು—ಮರುಳ ಮುನಿಯ ॥ ೭೩೩

ಸೃಷ್ಟಿಯುಚ್ಛ್ವಾಸ ನಿಶ್ವಾಸಗಳೆ ನಿನ್ನುಸಿರು ।
ಬಟ್ಟಬಯಲಲೆ ನೀನವಳವೇಗದುಸಿರೊಳ್ ॥
ಇಷ್ಟ ನಿನಗೊಲಿದುಸಿರೆ ಕಷ್ಟ ಮುನಿದುಸಿರಲವಳ್ ।
ಅಷ್ಟೆ ನಿನ್ನಸ್ತಿತ್ವ—ಮರುಳ ಮುನಿಯ ॥ ೭೩೪

ಎಲೆಹಸಿರೆ ತೊಡುವುದೆಲೆಯೊಳಿಹ ಹುಳುವಿನ ತೊಗಲು ।
ಕೊಳುವುದದು ತೊಗಟೆಯಿಂ ತೊಗಟೆ ಬಣ್ಣವನು ॥
ಇಳಿವುವಂತೆಯೆ ಜೀವದೊಳಕೆ ಪರಿಸರದ ಗುಣ ।
ಒಳಗಹುದು ಹೊರಗಣದು—ಮರುಳ ಮುನಿಯ ॥ ೭೩೫

ಅಗಣಿತದ ವಿವಿಧಪರಿಮಾಣದ ಗುಣಗ್ರಂಥಿ ।
ಬಗೆಗೊಳ್ವುದೊಂದು ಜೀವ ವ್ಯಕ್ತಿಯಾಗಿ ॥
ಮಂಗುಳಿ ತಾನೀವುದದು ಸಹಜೀವಿಗಳ್ಗಿನಿತೊ ।
ಸ್ವಗುಣಾಂಶ ಲೇಶಗಳ—ಮರುಳ ಮುನಿಯ ॥ ೭೩೬

## ಎಲ್ಲರೊಳಗೊಂದಾಗು

ಊರ ಕೈ ಹಸುಳೆ ನೀಂ ನೂರಡಿಗೆ ಮೆಟ್ಟುಶಿಲೆ ।
ಪೂರಕವೊ ನಿನ್ನ ಬಾಳ್ಗಿಳಿದ ಲೋಕದ ಬಾಳ್ ॥
ಓರೊಂಟಿಯಿರುವೆನೆನ್ನುವೆಯ ಅದು ಬಾಳ್ವೆಯೇಂ ? ।
ಮಾರಕವೊ ಬೇರೆತನ—ಮರುಳ ಮುನಿಯ ॥ ೭೩೭

ಅಗ್ನಿವೊಲ್ ವ್ಯಕ್ತಿತೇಜಂ ಸಮಿಧೆಯದಕೆ ಸಂ– ।
ಲಗ್ನವಹಾದೊಡನಾಗ ಬೂದಿಯಪ್ಪುದದು ॥
ಭಗ್ನವಾಗವೆ ರಾಷ್ಟ್ರ ಜನ ಧರ್ಮಸಂಸ್ಥೆಗಳ್ ।
ವಿಘ್ನತನಿರಲ್ ವ್ಯಕ್ತಿ—ಮರುಳ ಮುನಿಯ ॥ ೭೩೮

ಬಡವರೊಳು ಬಡವನಹ ಧನಿಕರೊಳು ಧನಿಕನಹ ।
ಹುಡುಗರೊಳು ಹುಡುಗನಹ ಮುದುಕರೊಳು ಮುದುಕಂ ॥
ಪಡುವನವನೆಲ್ಲರೊಡನವರವರ ಪಾಡುಗಳ ।
ಕಿಡದೆ ತನ್ನೊಳು ಯೋಗಿ—ಮರುಳ ಮುನಿಯ ॥ ೭೩೯

ಪಟ್ಟುತೀರಲೆ ಬೇಕು ಪಟ್ಟುತೀರಲೆ ಬೇಕು ।
ಕಟ್ಟಾಜ್ಞೆ ವಿಧಿಯುದಿದು ಪಟ್ಟು ನೀಂ ತೀರು ॥
ಕಷ್ಟವೋ ನಿಷ್ಠುರವೊ ದುಷ್ಟಸಹವಾಸವೋ ।
ಗಟ್ಟಿಮನದಿಂದೆ ಪಡು—ಮರುಳ ಮುನಿಯ ॥ ೭೪೦

ವೇಶ್ಯೆಯಹಾದೊಡವೆ ತಾನೊರ್ವಳಾಂತರ್ಯದಲಿ ।
ಬಾಹ್ಯದಲಿ ಬಯಸಿ ಬೆಲೆಯಿತ್ತವನಿಗೊಡವೆ ॥
ಆತ್ಮೀಯ ನೀನಂತರಂಗದಲಿ ಬಾಹ್ಯ ಪರ- ।
ವಶ್ಯನಾಗಿಹೆಯಯ್ಯ—ಮರುಳ ಮುನಿಯ ॥ ೭೪೧

ಬದುಕು ಬದುಕಿಂದಲೊಳ್ಬದುಕೆ ಬಿಡುಗಡೆ ನಿನಗೆ ।
ಸೊದೆ ತಳದೊಳಿಹುದು ನೀಂ ಬದುಕೆಲ್ಲರಂತೆ ॥
ಎದುರಿಸುತೆ ಬಿದಿಯ ಶಿಕ್ಷೆ-ಪರೀಕ್ಷೆಗಳನೆಲ್ಲ ।
ಅದಿರದಿರು ಬಿದಿಯೆದುರು—ಮರುಳ ಮುನಿಯ ॥ ೭೪೨

ಬದುಕು ಬದುಕೊಳ್ಬದುಕೆ ಬದುಕಸೆರೆಯಿಂ ನಿನಗೆ ।
ಬಿಡಂಗಡೆಯೊ ಮದುವೆಯಾಗದು ಬೇವುಬೆಲ್ಲ ॥
ಎದುರಿಸೆಲ್ಲ ಪರೀಕ್ಷೆಗಳ ವಿಧಿಯು ಕೊಟ್ಟಂತೆ ।
ಸುಧೆಯಿರ್ಪುದಾಳದಲಿ—ಮರುಳ ಮುನಿಯ ॥ ೭೪೩

ಏಕಾಂತದಂತೆ ಲೋಕಾಸ್ಥೆ ಮಠದಂತೆ ಮನೆ ।
ಬೇಕು ತತ್ತ್ವವ ತಾನೆ ಕಂಡನುಭವಿಸಲು ॥
ಕಾಕುತ್ಸ್ಥನೇಂ ಯತಿಯೆ ? ಗೋಕುಲೇಶಂ ವ್ರತಿಯೆ ? ।
ಸಾಕಹಮ ತುಳಿದಿರಲು—ಮರುಳ ಮುನಿಯ ॥ ೭೪೪

## ಚರಿತೆ ನಿನ್ನದು ಮುಖ್ಯ

ದುರಿತಲೋಕದಿನಳಿವುದೆಂದೆನುತ ಕೇಳದಿರು ।
ಅರಿವರಾರದರ ಹುಟ್ಟೆಂದೊ ಮುಗಿವೆಂದೋ ॥
ನೆರವೊ ನೀನದಕೆ ನೆರವಲ್ಲವೋ ಪೇಳದನು ।
ಚರಿತೆ ನಿನ್ನದು ಮುಖ್ಯ—ಮರುಳ ಮುನಿಯ ॥ ೭೪೫

ಆತುರಿಸದಿರು ಮುಕ್ತಿಗಾತುರಿಸದಿರು ತತ್ತ್ವ- ।
ಕಾತುರಿಸಬೇಡಾತ್ಮ ಪರಿಪಾಕಕೆಂದುಂ ॥
ಆತುರಾನ್ನದೊಳರ್ಧಪಕ್ವಾತಿಪಕ್ವಗಳು ।
ಯಾತನೆಗೆ ಮೂಲವಲೆ—ಮರುಳ ಮುನಿಯ ॥ ೭೪೬

ಅರಸುತ್ತ ತತ್ತ್ವವನು ಬಹುದೂರ ಚರಿಸದಿರು ।
ಅರಿವಿಗೆಟುಕಿದನಿತ್ತನೆಡೆಬಿಡದೆ ಚರಿಸು ॥
ತರುವಿನವೊಲರಿವು ತಾನಾಗಿ ಬೆಳೆವುದು ಸಾಜ ।
ಹೊರಗಂಟೆ ಬೇರ್ ಸಸಿಗೆ ?—ಮರುಳ ಮುನಿಯ ॥ ೭೪೭

ದೇವನುದ್ದೇಶವೇನೆಂದೆನಲು ನೀನಾರು ? ।
ಆವಶ್ಯಕವೆ ನಿನ್ನನುಜ್ಞೆಯಾತಂಗೆ ? ॥
ಆವುದೋ ಪ್ರಭುಚಿತ್ತವೇನೊ ಅವನ ನಿಮಿತ್ತ ।
ಸೇವಕಂಗೇತಕದು ?—ಮರುಳ ಮುನಿಯ ॥ ೭೪೮

ಏತಕಿಂತಿದೆ ಜಗದ್ರಚನೆಯೆಂದೆನ್ನದಿರು ।
ಹೇತು ಕರ್ತೃವನರಿತು ನಿನಗಪ್ಪುದೇನು ? ॥
ನೀತಿಯೇನಿಂದು (ಲೋಕ) ಪ್ರಕೃತದಲಿ ಹಿತದ ।
ರೀತಿಯನು ಬಗೆದು ತಿಳಿ—ಮರುಳ ಮುನಿಯ ॥ ೭೪೯

## ದ್ವಂದ್ವವಿರೆ ಸುಂದರತೆ

ದ್ವಂದ್ವವಿರೆ ಸುಂದರತೆ ಸುಂದರತೆಯಿಂದಾಶೆ ।
ಸಂದೀಪಿಸುವುದಾಶೆ ಜೀವಿತವ ಜೀವಂ ॥
ಬಂಧುತೆಯನಾಗಿಪುದು ಬಾಂಧವ್ಯ ಸಂಸಾರ ।
ದ್ವಂದ್ವಬಂಧನ ಸೃಷ್ಟಿ—ಮರುಳ ಮುನಿಯ ॥ ೭೫೦

ತನ್ನ ಜೊತೆಗಿನ್ನೊರ್ವನಿರದೆ ಬಾಳ್ ಸವಿಯಿಲ್ಲ ।
ಇನ್ನೊರ್ವನಿರಲನ್ಯತನವಿಲ್ಲದಿಲ್ಲ ॥
ಅನ್ಯಮನವಿರೆ ಭಿನ್ನಮತ ಘರ್ಷೆಯಿರದಿಲ್ಲ ।
ಭಿನ್ನದೊಳಭಿನ್ನನಿರು—ಮರುಳ ಮುನಿಯ ॥ ೭೫೧

ಸ್ವೀಯ ಪರಕೀಯವೆಂಬಿಂದ್ರಿಯ ವಿಷಯವೆಂಬ ।
ಕಾಯ ಮಾನಸವೆಂಬ ರಸಿಕ ರಸವೆಂಬ ॥
ಪ್ರೇಯಸೀ ಪ್ರಿಯವೆಂಬ ಪ್ರಕೃತಿ ಪೂರುಷರೆಂಬ ।
ಮಾಯೆಯಿಂ ದ್ವಂದ್ವಜಗ—ಮರುಳ ಮುನಿಯ ॥ ೭೫೨

ಹಸಿವಿರಿಯದಿರೆ ಜೀವವೆದ್ದು ನಡೆವಂತಿಲ್ಲ ।
ರಸದಾಶೆಯಿರದೆ ಹಸಿವಿನಲಿ ಹುರುಪಿಲ್ಲ ॥
ಅಸಮರುಚಿಯಿರದಂದು ರಸವಿವೇಕಿತೆಯಿಲ್ಲ ।
ವಿಷಮವಿಂತುಪಯುಕ್ತ—ಮರುಳ ಮುನಿಯ ॥ ೭೫೩

ಇಂದ್ರಿಯನಿರೋಧದಿಂ ಸರಸ ಜೀವನ ಭಂಗ ।
ರುಂದ್ರ ರಾಸಿಕ್ಯದಿಂದಾತ್ಮಗತಿ ಭಂಗ ॥
ದ್ವಂದ್ವದ ಸಮನ್ವಯದ ಬಂಧುರತೆಯಿಂದ ನೀಂ ।
ಸಾಂದ್ರಾತ್ಮ ಜೀವಿಯಿರು—ಮರುಳ ಮುನಿಯ ॥ ೭೫೪

ನೆಲ ಪರಿಯುತಿರೆ ಮನೆಯು (ನಿಂತೀತೆ ಮುರಿಯದೆಯೆ) ।
ಜಲ ಪರಿಯದಿರೆ ಜನರ್ ಕುಡಿಯಲಹುದೇನು ? ॥
ಜ್ವಲನ ತಂಪಾಗುವನೆ ಬಿಸಿಕೊಡುವರಾರಾಗ ? ।
ಕೆಲಸವೊರ್ವರಿಗೊಂದು—ಮರುಳ ಮುನಿಯ ॥ ೭೫೫

## ಹೋಲಿಕೆ ಸಲ್ಲದು

ಪ್ರಾಪಂಚಿಕದ ವಸ್ತು ವರ್ಗಂಗಳೊಳು ತೋರು- ।
ವೌಪಮ್ಯವೇನದಾಮೂಲಾಗ್ರಮಲ್ತು ॥
ಆಪಾತಮಾತ್ರವನು ಪರಿಕಿಸಲ್ ವ್ಯಕ್ತಿಯಲಿ ।
ಸೋಪಾಧಿಕವೊ ಸಾಮ್ಯ—ಮರುಳ ಮುನಿಯ ॥ ೭೫೬

ನಾರಿಕೇಳವ ನೋಡು ಹೊರಗೆ ಗಡಸಿನ ಹೊದಕೆ ।
ನೀರಲೆವುದದರುದರದಲಿ ಸೃಷ್ಟಿಯಂತು ॥
ಶಾರೀರ ಕೃತಿಗಳಲಿ ಸಾಮ್ಯ ನಿಯಮವ ತೋರಿ ।
ಸ್ವೈರವೆನಿಪಳು ಮನವ—ಮರುಳ ಮುನಿಯ ॥ ೭೫೭

ವ್ಯಕ್ತಿತೆಯೇ ವಿಶ್ವವೃಕ್ಷದೊಳನುದಿನದ ಕುಸುಮ ।
ಮೌಕ್ತಿಕವದೀ ಜಗಜ್ಜಲಧಿಕುಹರಗಳೊಳ್ ॥
ಪ್ರತ್ಯೇಕ ಜೀವಕಂ ಪ್ರತ್ಯೇಕವಿಹುದು ಗತಿ ।
ಮುಕ್ತಿ ವೈಯಕ್ತಿಕವೊ—ಮರುಳ ಮುನಿಯ ॥ ೭೫೮

ಕ್ಷಣವೆರಡಕೆರಡುಗತಿ ಕಾಲಪ್ರವಾಹದಲಿ ।
ಕಣವೆರಡರಂದವೆರಡುಸಬು ರಾಶಿಯಲಿ ॥
ದಿನದಿಂದ ದಿನ ಬೇರೆ ನರನಿಂದ ನರ ಬೇರೆ ।
ಅನುರೂಪದಶೆ ಬಾಹ್ಯ—ಮರುಳ ಮುನಿಯ ॥ ೭೫೯

ವಕ್ತ್ರಶಿರ ಕರ್ಣಾಕ್ಷಿಕರಪದಾದ್ಯಂಗಗಳು ।
ಮರ್ತ್ಯಸಾಮಾನ್ಯಂಗಳೆಲ್ಲರ್ಗ ಮೀಹವು ॥
ಪೃಥ್ವೀಜೆ ಶೂರ್ಪಣಖಿಯರ್ಗೆ ರೇಖಾ ಮಾತ್ರ ।
ವೆತ್ಯಾಸ ರೂಪದಲಿ—ಮರುಳ ಮುನಿಯ ॥ ೭೬೦

## ತೃಪ್ತಿ ಇರಲಿ

ದೃಷ್ಟಿ ವಿಸ್ತೃತಮಾಗಿ ದಿಕ್ತಟಂಗಳ ಹಾಯ್ದು ।
ಸೃಷ್ಟಿಯೆಲ್ಲವನಾತ್ಮಭಾವವಾವರಿಸೆ ॥
ಇಷ್ಟವೇಂ ಕಷ್ಟವೇನಾ ಮಹೈಕ್ಯಜ್ಞಂಗೆ ।
ತುಷ್ಟನವನೇಗಳಂ—ಮರುಳ ಮುನಿಯ ॥ ೭೬೧

ದೇವರೆನುವೊಂದು ಬೇರಿರ್ದೊಡೇನಿರದೊಡೇನ್ ? ।
ಜೀವನವೆ ದೈವಮಹಿಮೆಗೆ ಸಾಕ್ಷಿಯಲ್ತೆ ? ॥
ತೀವಿ ಸೌಂದರ್ಯಗಾಂಭೀರ್ಯಂಗಳಿಂ ಬಾಳಿ ।
ದೇವ ಸಮನೆನಿಸು ನೀಂ—ಮರುಳ ಮುನಿಯ ॥ ೭೬೨

ಸೊಗವ ಪಸರಿಸಬೇಕು ಹಗೆಯು ಹೋಗೊಡಬೇಕು ।
ಸೊಗವನಾಂತಾ ಕೃತಜ್ಞನ ಮೊಗದಿನೊಗೆವಾ ॥
ನಗುಗಳಾನಂದಮಯ ಶಿವನೊಡಲ ಹೊಳಪಾಗಿ ।
ಜಗವ ಕಂಗೊಳಿಯಿಪುವೊ—ಮರುಳ ಮುನಿಯ ॥ ೭೬೩

ಜೀವ ತಾಂ ಬ್ರಹ್ಮದೈಶ್ವರ್ಯವದ ಗೌರವಿಸು ।
ಜೀವದಶೆಯುಚ್ಚ ನೀಚಗಳ ನೀನರಿತು ॥
ಜೀವಿತೋದ್ಧೃತಿಯನಾದನಿತಾಗಿಸೆಲ್ಲರ್ಗೆ ।
ಜೀವಸಾಹ್ಯವೆ ಧರ್ಮ—ಮರುಳ ಮುನಿಯ ॥ ೭೬೪

ಬಂದ ಸುಖವನು ಬಿಡದೆ ಬಾರದುದ ಬೇಕೆನದೆ ।
ದಂದುಗಂಬಡದೆ ಮನದೆಚ್ಚರವ ಬಿಡದೆ ॥
ಸಂದುದನದೇಕೆನದೆ ಮುಂದದೇಂ ಗತಿಯೆನದೆ ।
ಹೊಂದಿಕೊಳೊ ಬಂದುದಕೆ—ಮರುಳ ಮುನಿಯ ॥ ೭೬೫

ಹೊಟ್ಟೆಪಾಡಿಗದೊಂದು ಸದ್ಯ ದುಡಿವುದ್ಯೋಗ ।
ಕಷ್ಟದಲಿ ಪಾಲ್ಗೊಂಡು ನಗು ನಗಿಪ ಸತಿಯುಳ್ ॥
ನಿಷ್ಠೆ ಪೂಜೆಯಗೊಂಡು ಧೈರ್ಯತುಂಬುವ ದೈವ—।
ಇಷ್ಟಿರಲು ಚಿಂತೆಯೇಂ ?—ಮರುಳ ಮುನಿಯ ॥ ೭೬೬

ಸ್ವಾಂತದಿರ್ಕೊರಲೊಂದೆ ಪದವ ಪಾಡುವನಾಗು ।
ಸಂತತ ಜಗದ್ಗ್ರಂಥಿ ಸಡಲಿದವನಾಗು ॥
ಅಂತರಾತ್ಮದಿನಿರತವೊಂದುಮಿಲ್ಲದನಾಗು ।
ಶಾಂತಿಸಂಸ್ಥಿತನಾಗು—ಮರುಳ ಮುನಿಯ ॥ ೭೬೭

## ಬಿಗಿ ಮನಸಿನಲೆತವಂ

ಹಗೆ ಬೇರೆ ನಿನಗಿಲ್ಲ ಕೆಳೆ ಬೇರೆ ನಿನಗಿಲ್ಲ ।
ಸೊಗವೊ ದುಗುಡವೊ ನಿನಗೆ ನೀಂ ಮಾಡಿದಂತೆ ॥
ಬಿಗಿ ಮನಸಿನಲೆತವಂ ಬಿಗಿಯಿಂದ್ರಿಯಂಗಳಂ ।
ಜಗಕೆ ನೀನೊಡನಾಡಿ—ಮರುಳ ಮುನಿಯ ॥ ೭೬೮

ಅಣುವ ಸೀಳಲುಬಹುದು ಕಣವನೆಣಿಸಲುಬಹುದು ।
ತಣು ಬಿಸಿಗಳೊತ್ತಡವ ಹಿಡಿದಳೆಯುಬಹುದು ॥
ಗಣಿಸಲಳವೇ ಪ್ರೇಮ ಸುಖ ದುಃಖ ಮಹಿಮೆಗಳ ।
ಮನದ ಮೂಲವತರ್ಕ್ಯ—ಮರುಳ ಮುನಿಯ ॥ ೭೬೯

ತಬ್ಬಿಕೊಳದಿರು ಹಸುಳೆ ನಿನ್ನದಾದೊಡಮದನು ।
ತಬ್ಬಲಿಯು ಮುಂದೆ ಆವನೆದೆಯೊಳದರಿಂದೆ ॥
ಅಬ್ಬೆ ತನಗಿಲ್ಲ ತನ್ನನು ಕೇಳ್ವರಿಲ್ಲೆನ್ನು–।
ವುಬ್ಬೆಗಂ ಪುಟ್ಟೀತು—ಮರುಳ ಮುನಿಯ ॥ ೭೭೦

ಗೃಹಿಧರ್ಮವನು ನಿನ್ನ ಮಹಿಯ ಚೌರ್ಯಕೆ ಹೊದಿಸಿ ।
ಸಹಜ ಲೋಭಿತೆಯ ನಿಃಸ್ಪೃಹತೆಯೆನ್ನುವುದೆ ? ॥
ವಹಿಪುದು ಕುಟುಂಬ ಭಾರವನಾತ್ಮದೆಲುಬುಗಳು ।
ಸಹಿಸಲಹ ವಿಂತಿಯೊಳಗೆ—ಮರುಳ ಮುನಿಯ ॥ ೭೭೧

ಎನಗಾಗದೊಳಿತಾರ್ಗ್ಗಮಾಗದಿರಲೆನ್ನದಿರು ।
ತನು ಭೇದದಿಂದಾತ್ಮ ಭೇದವೆಣಿಸದಿರು ॥
ಮನದ ರಾಜ್ಯದೊಳೆಲ್ಲರೆಲ್ಲೊಳಿತುಗಳನು ನೀ– ।
ನನುಭವಿಸಲಾರೆಯಾ ?—ಮರುಳ ಮುನಿಯ ॥ ೭೭೨

## ಮನಸ್ಸು – ಸಂದೇಶ

ಮನುಜ ಯಂತ್ರವ ಪೋಲ್ವ ಯಂತ್ರವಿನ್ನೆಲ್ಲಿಹುದು ? ।
ಮನದವೊಲು ಗರಗಸದ ಚಕ್ರವಿನ್ನೆಲ್ಲಿ ? ॥
ಅನಿಲಗತಿಯಿಂ ವಿಚಲ ತರವಲ್ತೆ ಮನದ ಗತಿ ।
ಮನ ಕೊಂಕು ಜನ ಡೊಂಕು—ಮರುಳ ಮುನಿಯ ॥ ೭೭೩

ಸಂದೇಹವೇಂ ಮನದೊಳ್ ? ಇರಲಿ, ಕುದಿಗೊಂಡಿರಲಿ ।
ಬೆಂದಲ್ಲದಿಳಿದೀತೆ ತಿಳಿವಿನೊಳಸಾರ ? ॥
ತಂದೆ ನಿಶ್ಚಯಕೆ ಸಂಶಯ ಬುದ್ಧಿಮಥನದಿಂ ।
ಬಂದಪುದು ತತ್ತ್ವಸುಧೆ—ಮರುಳ ಮುನಿಯ ॥ ೭೭೪

ಸಂದೇಹ ಮೊದಲಿರದ ನಂಬುಗೆಯುದೇಂ ಪಾಯ ।
ಬಂಧವಿರದಾಗಾರ ಗಾಳಿಯೆಡೆ ಸೊಡರು ॥
ದ್ವಂದ್ವವಾದದಿನನಾವೃತವಾಗೆ ಸೂಕ್ಷ್ಮೇಕ್ಷಣ್ ।
ಮುಂದೆ ನಿಲುವುದು ತಥ್ಯ—ಮರುಳ ಮುನಿಯ ॥ ೭೭೫

ಸಂದೇಹವಿರಲಿ ಸುಯ್ತಿರದೆ ಕುದಿಯುತ್ತಿರಲಿ ।
ಹಿಂದು-ಮುಂದುಗಳ ನೆನೆದದು ಬೆದಕುತಿರಲಿ ॥
ಎಂದೊ ಬೇಸಗೆಯಲೊಂದುದಿನ ಮಳೆ ಬರುವಂತೆ ।
ಬಂದು ತಣಿಪುದು ತಥ್ಯ—ಮರುಳ ಮುನಿಯ ॥ ೭೭೬

ಗುರುವ ಬಿಡಲೊಲದು ಜನ ಪಿಡಿಯದವನನು ತೀರೆ ।
ಧರಣಿಯಲಿ ನಿಂದಿರದು ಗಗನಕ್ಕೈದದದು ॥
ಅರೆಯದನುಮರೆಯಿದನುಮನುಗೂಡಿಸುತಲೆಂತೊ ।
ಚರಿಸುವುದು ಹದವೆಣಿಸಿ—ಮರುಳ ಮುನಿಯ ॥ ೭೭೭

## ಕಲಿ ಸೈಸಲುಭಯವನು

ಕಲಬೆರಕೆ ಜೀವಗತಿಯೊಳಿತಲ್ಲದಗಳ ಬೆರಕೆ ।
ಬೆಳಕು ನೆರಳಿನ ಬೆರಕೆ ಹುಳಿಸು ಸಿಹಿ ಬೆರಕೆ ॥
ತಿಳಿವು ಮಬ್ಬಿನ ಬೆರಕೆ ಕೊಳಕು ಚೊಕ್ಕಟ ಬೆರಕೆ ।
ಕಲಿ ಸೈಸಲುಭಯವನು—ಮರುಳ ಮುನಿಯ ॥ ೭೭೮

ಜೇನು ಕಪ್ಪುರ ಕೇಸರಗಳಿಹವು ಪಾಲಿನೊಳು ।
ಲೀನ ವಿಶದಗಳಾಗಿ, ನಿರಹಮಹ ಸ್ವಾರ್ಥಂ ॥
ಜ್ಞಾನಿ ಹಿತಕರನಿಹನು ಲೋಕಕ್ಕೆ ನಿಃಸ್ವಾರ್ಥ ।
ಲೀನ ವಿಶದದ ಬಾಳು—ಮರುಳ ಮುನಿಯ ॥ ೭೭೯

ಕಮನ ಕಾರಣ ಸೃಷ್ಟಿ ಪೋಷಿಪಳ್ ಸ್ವಾರ್ಥತೆಯು ।
ಸ್ವಮತಿಯತ್ನದಿನೆ ನಿಃಸ್ವಾರ್ಥಗುಣ ನಿನಗೆ ॥
ಮಮತೆಯಿಂದಾತ್ಮ ಸಂಕೋಚ ನಿರ್ಮಮತೆಯಿಂ- ।
ದವಿತಾತ್ಮ ವಿಸ್ತಾರ—ಮರುಳ ಮುನಿಯ ॥ ೭೮೦

ಟಂಕಕವ ಮೊದಲು ನಿರವಿಸಿದವಂ ಪೊಸತೊಂದು ।
ಬೆಂಕಿಯಂ ನರೆ ಸೋದರರೆ ನಡುವೆ ತಂದಂ ॥
ಅಂಕುರಿಸಿತಂದದರಿನೊಂದಸೂಯಾ ಸ್ಪರ್ಧೆ ।
ಸಂಕಟವದನುಪಮವೊ—ಮರುಳ ಮುನಿಯ ॥ ೭೮೧

ತರಣಿ ಜಲವಾಯುಗಳ ಸಿರಿಯೆನುವನೇ ನರನು ? ।
ಸರಿಸಮದೊಳೆಲ್ಲರಿಂಗಿಹ ಪುರುಳು ಪುರುಳೇಂ ? ॥
ಹೆರರಿಗಿಲ್ಲದೆ ತನ್ನಮಾತ್ರಕಿಹ ಸಿರಿಯೆ ಸಿರಿ ।
ತರತಮವೆ ಜನದೆಣಿಕೆ—ಮರುಳ ಮುನಿಯ ॥ ೭೮೨

ಒಳಿತು ಕೇಡುಗಳೆರಡು ನಿನ್ನನುಭವದ ರೀತಿ ।
ಕಳವಳದಿನಾಚೆ ಮೇಲಿಹುದು ಪರಸತ್ತ್ವ ॥
ಕಳಚು ನೀಂ ಸ್ವಾರ್ಥವನು ಬಳಕೆಯಾಚಾರವನು ।
ತೊಳಗು ನಿಃಸ್ವಾರ್ಥದಲಿ—ಮರುಳ ಮುನಿಯ ॥ ೭೮೩

## ಸಹಿಸುವುದು ಬಂದುದನು

ಸಹಿಸುವುದು ಸವಿಯುವುದು ಕಹಿಯೂಟ ಸಹಿಸುವುದು ।
ಬಹುವಾಯಿತೆಂದೆನದೆ ಕಹಿಯು ಸಹಿಸುವುದು ॥
ಕಹಿ—ಸಿಹಿಗಳೆರಡಲ್ಲವೊಂದೆಯೆನಿಪನ್ನೆಗಂ ।
ಸಹಿಸುವುದು ಬಂದುದನು—ಮರುಳ ಮುನಿಯ ॥ ೭೮೪

ಹಳೆಯ ಮನೆ ಮಳೆಯ ಹೊಡೆತದಿನುರುಳಿ ಮಣ್ಣಪ್ಪು- ।
ದಿಳೆಗೆ ದಿನದಿನದ ಪಾಡದರೊಳತಿಶಯವೇಂ ? ॥
ಅಳಿದ ಮನೆಯನು ಮರಳಿ ಕಟ್ಟಿ ನಿಲ್ಲಿಸಿ ಬಾಳ ।
ಬೆಳಗಿದೊಡೆ ಸುಕೃತ ಕಥೆ—ಮರುಳ ಮುನಿಯ ॥ ೭೮೫

ಪೂರ್ವಜನ್ಮದ ಕರ್ಮಮನುಭವಿಸಲಹುದೀಗ ।
ಭಾವಿ ಕಾಲವುಮಿಹುದು ಶೇಷ ಮಿಕ್ಕಿರಲು ॥
ಜೀವಕ್ಕೆ ಹಿಂದುಂಟು ಮುಂದುಂಟು ಮುಗಿವಿಲ್ಲ ।
ಆವಗಂ ನೆನೆದು ಬಾಳ್—ಮರುಳ ಮುನಿಯ ॥ ೭೮೬

ಪುರುಷನೋಲಗವೆಲ್ಲ ಮರಣದೂಳಿಗವೆನುತ ।
ಕೊರಗುತಿರಲಪ್ಪುದೇನ್ ? (ಅದು ತಪ್ಪಿತೇನಂ ?) ॥
ನರಜನುಮ ಪರಿಶುದ್ಧಿಯವಕಾಶವರಿತದನಂ ।
ಪರಿಪುಷ್ಟಿಯನಂ ಗಳಿಸು—ಮರುಳ ಮುನಿಯ ॥ ೭೮೭

ಸತ್ತ್ವರಜ ತಮಗಳ ಸ್ಪರ್ಧೆಯೆ ಜಗಲ್ಲೀಲೆ ।
ಎತ್ತರದಲೆಯ ತೆರೆಯ ಬೀಳೇಳು ಕಡಲು ॥
ಉತ್ತಮನು ಲೀಲೆಯಂ ಲೀಲೆಯೆಂದಾಡುವನು ।
ಅತ್ತು ನಿಂತರು (ಕೆಲರು)—ಮರುಳ ಮುನಿಯ ॥ ೭೮೮

ಸಹನೆ ಜೀವಕೆ ವಿಜಯ ಸಹಿಸು ಬಂದುದನೆಲ್ಲ ।
ಸಹಿಸು ಬೇಡದೆ ಬಂದ ಪಾಡನೆಲ್ಲ ॥
ಸಹನೆ ನಿನ್ನಾತ್ಮವನು ಗಟ್ಟಿಪಡಿಪಭ್ಯಾಸ ।
ವಿಹಿತವದು ಮನುಜಂಗೆ—ಮರುಳ ಮುನಿಯ ॥ ೭೮೯

ಸೈಸುವನೆ ಜೈಸುವನು ತಾಳ್ಮೆಯೋ ಮೇಲ್ಮೆಯ್ಯೆ ।
ಸಾಸರೋಷಗಳಹುದು ದೋಷ ಭೀಷಣವು ॥
ಸೈಸೇನು ಸೋಲಲ್ಲ ಅನ್ಯಾಯದೊಪ್ಪಲ್ಲ ।
ಸೈಸುತೆದುರಿಸು ವಿಧಿಯ—ಮರುಳ ಮುನಿಯ ॥ ೭೯೦

## ತಡೆಯುಂಟೆ ನರಮನಕೆ

ಕಡಲೆರಡು ಸೃಷ್ಟಿಯಲಿ ನೀರರಾಶಿಯದೊಂದು ।
ಬಿಡುಗೊಳದ ಮನುಜಮಾನಸರಾಶಿಯೊಂದು ॥
ಅಡಿಗಡುಗಳುಂಟು ನೀರ್ಗದನಳೆವ ಭಟರುಂಟು ।
ತಡೆಯುಂಟೆ ನರಮನಕೆ ?—ಮರುಳ ಮುನಿಯ ॥ ೭೯೧

ಅರಸು ನಿನ್ನೊಳಹಂತೆ ಎಲ್ಲಿಹುದೊ ಎಂತಿಹುದೊ ।
ಸಿರಿಯಾಶೆ ಸುಖದಾಶೆ ಬಂಧುಜನದಾಶೆ ॥
ಬಿರುದು ಯಶದಾಶೆಗಳು ಬೇರೆ ರೂಪದಲಿಪ್ಪ ।
ಗರುವವೆಲ್ಲವದಹುದು—ಮರುಳ ಮುನಿಯ ॥ ೭೯೨

ಕುಚ್ಚು ಕುಚ್ಚಾಗಿ ತಲೆಕೂದಲನು ಹೆಣೆಯುವರು ।
ಮೆಚ್ಚಿಕೊಳ್ಳುವರದನು ನೋಳ್ಪ ಜನರೆಲ್ಲ ॥
ಬಚ್ಚಿಂಬರದು ಬೇರೆ ತಾವಿನೊಳು ಬೆಳೆದಿರಲು ।
ಹುಚ್ಚಲ್ಲವೇನೊ ಇದು ?—ಮರುಳ ಮುನಿಯ ॥ ೭೯೩

ಪಾಶ ಪಾಶಗಳಾಗಿ ತಲೆಯೊಳಿರಲದು ತುಂಬ ।
ಲೇಸೆಂಬೆ ತುರುಬೆಂದು ವೇಣಿಲೆಂದು ಹೂವ ॥
ಪಾಶವದು ಬೇರೆ ಅಂಗದೊಳಲ್ಲವೇನದಕೆ ।
ಹೇಸುವುದದೇನೆಲವೊ—ಮರುಳ ಮುನಿಯ ॥ ೭೯೪

ಬೇಕು ಬೇಕೆನೆ ಕಲಹ ಸಾಕು ಸಾಕೆನೆ ಶಾಂತಿ ।
ಲೋಕವೃತ್ತಿಯು ನಯವದಾತ್ಮ ನೀತಿಯದು ॥
ಬೇಕೆನ್ನುವುದ ಕಲಿತು ಸಾಕೆನ್ನುವುದ ಮರೆಯೆ ।
ವ್ಯಾಕುಲತೆ ತಪ್ಪೀತೆ ?—ಮರುಳ ಮುನಿಯ ॥ ೭೯೫

## ಶಾಸ್ತ್ರ, ಕಾವ್ಯ, ಕಲೆ

ಕೃಷ್ಣಶಿಲೆಯೊಂದು ಕಡೆ ಜಕ್ಕಕಲೆಯೊಂದು ಕಡೆ- ।
ಯನ್ಯೋನ್ಯವರಸುತ್ತೆ ಕರೆಯುತ್ತೆ ಜಗದಾ ॥
ಪುಣ್ಯದಿಂದೊಡಗೂಡಲಾಗಳುಭಯರ ಮುಕ್ತಿ ।
ಚೆನ್ನಕೇಶವಮೂರ್ತಿ—ಮರುಳ ಮುನಿಯ ॥ ೭೯೬

ಹೃದಯಂ ಹಿಮಘನ ಖಂಡವಂ ಕಾರ್ಯರವಿ ಸೋಕೆ ।
ಮಧುರಾನುಭವ ಸಲಿಲ ಪರಿದು ಚಿಂತೋರ್ಮಿ- ॥
ಯುದಿಸಿ ಜೀವನ ತೊಳೆದು ಧರ್ಮದೀವಿಯೊಳಿರಿಸಿ ।
ಸೊದೆಯಪ್ಪುದಾತುಮಕೆ—ಮರುಳ ಮುನಿಯ ॥ ೭೯೭

ಶ್ರುತಿಶಾಸ್ತ್ರ ವಿದ್ಯೆಗಳು ಮತರಾಜ್ಯ ನೀತಿಗಳು ।
ಹಿತಲೋಕಕನಿಪೆಲ್ಲ ವಿವಿಧ ರಚನೆಗಳು ॥
ಪ್ರತಿಕರ್ಮಗಳ್ ಪ್ರಕೃತಿ ಕೃತಕಕವು ಪುರುಷಸ್ಥ- ।
ಗಿತ ಧರ್ಮಸಾಕ್ಷಿಗಳು—ಮರುಳ ಮುನಿಯ ॥ ೭೯೮

ಮನಕರಗಿ ರಸವಾಗಿ ರಸದಿಂ ವಿಚಾರೋಷ್ಮ ।
ಜನಿಸಿ ಜೀವಿತದೆಲ್ಲ ಕರಣಗಳೊಳಿಳಿದು ॥
ಅನುರಂಜಿಸುವುದಾತ್ಮವನು ಕಾವ್ಯಕಲೆಗಳಾ- ।
ಧ್ವನನಪ್ರತಾಪವದು—ಮರುಳ ಮುನಿಯ ॥ ೭೯೯

ಶಿಲೆಯು ಜಲವಾಗಿಪುದು ಜಲವ ಶಿಲೆಯಾಗಿಪುದು ।
ಕಲೆಯು ಹೃದ್ಯೋಷ್ಮವದರಿಂದಾತ್ಮ ಮಲವ ॥
ಕಳೆಯದಾತಂಗೆ ಧರ್ಮ ವಿವೇಕ ದೃಷ್ಟಿಪಥ ।
ಸುಲಭವೆಂತಾದೀತು ? — ಮರುಳ ಮುನಿಯ ॥ ೮೦೦

ನವಿಲವೊಲ್ ಸರಸಕಲೆ, ಗರಿಯವೊಲ್ ಭಾವಾರ್ಥ ।
ವಿವಿಧವರ್ಣ ವಿಲಾಸ ಚಿತ್ರವಿರದೊಡದೇಂ ? ॥
ಕವಿತಾಭಿನಯ ಗಾಯನ ಸ್ಪರ್ಶವೇದಿಯಹಾ ।
ಛವಿಸೋಕೆ ನೀಂ ಚಿನ್ನ—ಮರುಳ ಮುನಿಯ ॥ ೮೦೧

ಜೀವಕ್ಕೆ ಸತ್ಯಾರ್ಥವನ್ನು ಬೆಳಗಿಸುತಿರುವ ।
ದೀವಿಗೆಗಳೀ ಮೂರು ಹೊರಗೊಳಗೆ ಸುತ್ತಲ್ ॥
ಕಾವ್ಯ ವಿಜ್ಞಾನಂಗಳಿವು ಮೇಲೆ ದೈವಪ್ರ—।
ಭಾವವೀ ಮೂರೆಲವೊ—ಮರುಳ ಮುನಿಯ ॥ ೮೦೨

ಹೃದಯ ಬುದ್ಧಿಗಳೆರಡು ಸತತ ಪ್ರವಂತಿಗಳು ।
ಬದುಕಿದರ ನಡುವಣ ದ್ವೀಪಿಕಾಕ್ಷೇತ್ರ ॥
ನದಿಯೊಂದು ಕಾವ್ಯವಿನ್ನೊಂದು ಶಾಸ್ತ್ರದ ಶಾಖೆ ।
ಹದವುಭಯದಿಂ ಜೀವ—ಮರುಳ ಮುನಿಯ ॥ ೮೦೩

ವಚನದೊಳೊ ರಾಗದೊಳೊ ವರ್ಣದೊಳೊ
ರೇಖೆಯೊಳೊ ।
ಉಚಿತ ಪರಿಮಾಣ ವಿನ್ಯಾಸ ಕಲ್ಪನೆ ಭೂ—॥
ಪ್ರಚರದಲಿ ನಿನ್ನನೆಳೆದಾಡುತನ್ಯದ್ವೀಪ ।
ರುಚಿಯನಾಗಿಪುದು ಕಲೆ—ಮರುಳ ಮುನಿಯ ॥ ೮೦೪

ಪರಿಚಿತರ ಚರ್ಯೆಯೊಳಪರಿಚಿತಾವೇಶಗಳ ।
ನಿರವಿಸುತಲಂತಪೂರ್ವದೊಳಾಸೆಗೆಯ್ಸಿ ॥
ಹೊರಗಣಿಂದೊಳಜಗಕೆ ಜೀವನಯನವನೆಳೆವ ।
ಸುರಲೋಕಸುರೆಯೊ ಕಲೆ—ಮರುಳ ಮುನಿಯ ॥ ೮೦೫

ಜಯವೆನ್ನು ಜೀವಕ್ಕೆ ಜಯ ಜೀವಲೋಕಕ್ಕೆ ।
ಜಯ ಜೀವ ಮೂಲಕ್ಕೆ ಜಯ ಜೀವಿತಕ್ಕೆ ॥
ಜಯಂ ನಿರಂತರ ಜೀವ ನಾಟಕ ವಿಧಾತಂಗೆ ।
ಜಯ ನಿರ್ಮಮಾತ್ಮಂಗೆ—ಮರುಳ ಮುನಿಯ ॥ ೮೦೬

---

# ಪರಿಶಿಷ್ಟ

ಅಬ್ಬಬ್ಬ ! ಲೋಕವೇಂ ಬೊಬ್ಬಿರಿಯುತಿಹುದಿಂತು ।
ಮಬ್ಬಿನೊಳ್ ಪ್ರೇತಗಳ್ ಪೋರಿ ಚೀರ್ವಂತೆ ॥
ಅಭ್ಯುದಯವಿದಕುಂಟೆ ಸಭ್ಯತೆಗೆ ನೆಲೆಯುಂಟೆ ।
(ದಿಬ್ಬಣವಿದಂತಕಗೆ)—ಮರುಳ ಮುನಿಯ ॥ ೧

ಜೀವಪರಮಾತ್ಮರೇಕಾಂತವನುಭವವೇದ್ಯ ।
ಧೀವಿತರ್ಕಗಳಲ್ಲಿ ಮರಳೊಳುತ್ತ್ರಳುಮೆ ॥
ಆವ ಜೀವಕದೆಂತು ಸರಿಯೊ ಪೆರನಳಿವವನೆ ? ।
(ಮಾವು ಮೀನಿಗೆ ಸವಿಯೇ ?)—ಮರುಳ ಮುನಿಯ ॥ ೨

ಮೇಲೆ ತೆರೆಯುಬ್ಬರಗಳಬ್ಬರಗಳುರುಳಂಗಳು ।
ಆಳದಲಿ ಕಡಲದಲುಗದ ನಿತ್ಯಶಾಂತಿ ॥
ಬಾಳಿಕೆಯು ಮೇಲಂತು ಕಚ್ಚಾಟ ಹುಚ್ಚಾಟ ।
(ಮೂಲದಾತ್ಮನು ಶಾಂತ)—ಮರುಳ ಮುನಿಯ ॥ ೩

ಕೃತಕಲೋಕವಿದಯ್ಯ ಯಂತ್ರಕೃತಕವಿದೆಲ್ಲ ।
ಕೃತಕಾನ್ನ ಯಂತ್ರಕೃತ ಕೃತಕದ ಮಸಾಣ ॥
ಕೃತಕವಸ್ತ್ರಾಭರಣ (ಕೃತಕ ಜೀವನಭರಣ) ।
(ಕೃತಕನಲ್ಲದನೊಬ್ಬ)—ಮರುಳ ಮುನಿಯ ॥ ೪

ಸತ್ಯವೇ ದೇವರೆಂಬರು ಮಹಾತ್ಮರು ಕೆಲರು ।
ಸತ್ಯವಾವುದೊ ಎತ್ತಲೋ ಕಂಡರಾರು ? ॥
ಪೃಥ್ವಿಯನುಭವ ನೋಡೆ ಸೌಜನ್ಯವೇ ದೈವ ।
(ಕತ್ತಲೆಗೆ ದೀಪವದು)—ಮರುಳ ಮುನಿಯ ॥ ೫

ಗುಣವೆನಲ್ ಭೇದದರ್ಶನ ತಾರತಮ್ಯಮತಿ ।
ಎಣಿಸಿ ತೂಕದಿನಳೆವನಾರ್ ಅಮೇಯವನು ? ॥
ಮನುಜಮನಸಿಗೆ ಸುಲಭ ಪರಿಚಿತೇಷ್ಟಧ್ಯಾನ ।
(ನೆನಹಿಗೊಂದವಲಂಬ)—ಮರುಳ ಮುನಿಯ ॥ ೬

ಭಕ್ತಿಯೇಂ ಕುರುಡಂಗಲಾಚಿಕೆಯೆ ? ಕಂಬನಿಯೆ ? ।
ಶಕ್ತಿಶೂನ್ಯನ ಕೊರಲ ಗದ್ಗದವೆ ? ತಪವೆ ? ॥
ಯತ್ನವದು ನಿನ್ನೆಲ್ಲ ಶಕ್ತಿಯದು (ಯುಕ್ತಿಯದು) ।
ಬಿತ್ತು ಬೆಳೆ (ಗದು ನೋಡು)—ಮರುಳ ಮುನಿಯ ॥ ೭

ರಮಣೀಯದೊಳಮವಿತು ಯಮನು ಹೊಂಚುತ್ತಿಹನು ।
ಭ್ರಮಿಸುವೆಯ ರಮಿಸುವೆಯ ಮಮತೆ ತೋರುವೆಯ ? ॥
ಶ್ರಮವೊಲಿದು ಸಮೆಯಿಪ್ಪುದಂತಾನುಮಾಯೆಯವನು ।
(ರಮಣೀಯವೋ ಮಾಯೆ)—ಮರುಳ ಮುನಿಯ ॥ ೮

ದೇವನೆಂಬವನೊಬ್ಬನಿರ್ದೊಡೇನಿರದೊಡೇಂ ।
ಜೀವ ನಾನೆಂಬ ನೀಸಿಹುದು ದಿಟವಲ್ತೆ ? ॥
ಆ ವಾಸ್ತವವನೆ ನೀಂ ಪಿಡಿದು ತತ್ತ್ವವನರಸು ।
(ನಾವೆಯದು ಕಡಲಿಂಗೆ)—ಮರುಳ ಮುನಿಯ ॥ ೯

ಎನಿಬರೋ ಲೋಕಕ್ಕೆ ಬೋಧಕರು ಅದರಿನೇಂ ।
ಜನರ ಗತಿ ಮೇಲಾಯ್ತೆ ? (ಮಾನ ಶುದ್ಧವಾಯ್ತೆ ?) ॥
ಅನುಸರಿಸದೀಲೋಕ ಬೋಧನವ ಪೂರ್ಣದಲಿ ।
(ನಿನಗೆ ಚಿಂತೆಯದೇಕೊ ?)—ಮರುಳ ಮುನಿಯ ॥ ೧೦

ಜೀವವೊಂದಿನ್ನೊಂದು ಜೀವಕ್ಕೆ ಜೀವನಂ ।
ಮೇವು ಮರಿಮೀನ್ ತಿಮಿಗೆ ತಿಮಿ ತಿಮಿಂಗಿಲಕೆ ॥
ನಾವುಮಂತೊರ್ವನೊರ್ವನ ಕಚ್ಚಿ ತಿನದಿಹೆವೆ ?
(ಯಾವದಪ್ಪುದಹಿಂಸೆ ?)—ಮರುಳ ಮುನಿಯ ॥ ೧೧

ಪಕ್ವಪಡಿಸುತಲಿಹನು ಪಕ್ವವಾಗಿಸುತಿಹನು ।
ನಿಕ್ಕುವದಿ ವಿಧಿರಾಯ ನಮ್ಮ ಜೀವಗಳ ॥
ದುಕ್ಕಗಳ ಸೌಖ್ಯಗಳ ಸೊಕ್ಕುಗಳ (ಬಿಕ್ಕುಗಳ) ।
(ಲೆಕ್ಕವಿರಿಸಿರ್ಪೆಯೇನ್ ?)—ಮರುಳ ಮುನಿಯ ॥ ೧೨

ವಿದಿತಂಗಳಂ ರುತವಿದಿತಗತೋಳನುಭವವ ।
ಹೃದಯಕಾಗಿಪುದು ಕಲೆ ಸೃಷ್ಟಿಯಧಿಸೃಷ್ಟಿ ॥
ಅಧಮಲೋಕದೆ ಮನವನೊಯ್ದು (ಸಗ್ಗದೊಳಿರಿಸಿ)
(ವಿಧಮಿಪುದು ಶೋಕವನು)—ಮರುಳ ಮುನಿಯ ॥ ೧೩

ಬೆಳ್ಳುಳ್ಳಿಯನು ತಿಳಿಯೆ ಜಜ್ಜು ನೀನದನುಜ್ಜು ।
ಮಲ್ಲಿಗೆಯ ತಿಳಿಯೆ ಸೋಕದೆಯೆ ನೀಂ ಮೂಸು ॥
ಸಲ್ಲದೆಲ್ಲೆಡೆಯೊಳಗಮೊಂದೆ ಕಾರ್ಯೋಪಾಯ ।
(ಕಲ್ಲಿಗೇನೊರೆಗಲ್ಲೆ ?)—ಮರುಳ ಮುನಿಯ ॥ ೧೪

ಸುಡುಬಿಸಿಲೊಳೇಂಗೈವೆ ತಿದ್ದುವೆಯ ಸೂರ್ಯನನು ।
ಕೊಡೆಯ ಹಿಡಿಯುವೆ ನೆರಳ ಸೇರ್ವೆ ನಿಜಮತಿಯಿಂ ॥
ಕೆಡಕು ಜಗವೆಂದದನು ಹಳಿದೊಡೇಂ ನೀನದಕೆ ।
(ಇಡುಕುಪೆಯ ಸೌರಭವ ?)—ಮರುಳ ಮುನಿಯ ॥ ೧೫

ಹಸುಳೆಯುಳಲಲಳುವವನು ಹಸುಳೆನಗೆ ನಗುತಿಹನು ।
ಬಿಸಿಯಿರದು ತಣಿಪಿರದು ಸಮವವನ ಮನದೊಳ್ ॥
ಪುಸಿ ಜಗವ ನಿಸದ (ವೆನ್ನುವನೊಳಗೆ ನಸುನಗುತ) ।
ಮುಸುಕುಬಾಳ್ಕೆಯೊ ಜಾಣ್ಮೆ—ಮರುಳ ಮುನಿಯ ॥ ೧೬

ರಾಮನಿಂ ಶೂರ್ಪಣಖಿಗಾದುದುಗ್ರವಿಕಾರ ।
ಭೀಮನಿಂದ ಹಿಡಿಂಬಿಗಾಯ್ತು ಸಂತಾನ ॥
ಸಾಮಯಿಕನೀತಿ ಸಂದರ್ಭದಂತಾ ಗುಣದೆ ।
(ಧೀಮಂತ ನೀಂ ಜಗದಿ)—ಮರುಳ ಮುನಿಯ ॥ ೧೭

ಲೀಲೆ ನೆನಪಿನಲಿರಲಿ ಲೀಲೆಯುದು ಕರ್ತನಿಗೆ ।
ಕೋಲದುವೆ ಭವಜಲಧಿಯುಲಿ ಧರ್ಮಿಗಳ್ಗೆ ॥
ಗೋಳಾಟ ಮಿಕ್ಕರ್ಗೆ ಶೋಧನೆಯೆ ಸಾಧನವೊ ।
(ಬಾಳ ನೀಂ ಒಯ್ಯದಿರು)—ಮರುಳ ಮುನಿಯ ॥ ೧೮

* * *

ಮನಸೆ ಮನುಜಂಗಿರ್ಪ ವರಗಳ ಕಿರೀಟವದು ।
ಮನಸೆ ಮನುಜನ ಶಾಪ(ಗಳಿಗೆ ತಾಂ) ಮೂಲಂ ॥
ನೆನೆಯುಂತಿಹುದದು ನಾನು ನಾನೆನುತ್ತೇಗಳುಂ ।
ಅನಹವೆಂಬುದದೆಲ್ಲಿ — ಮರುಳ ಮುನಿಯ ॥ ೧೯

# ಕ್ಲಿಷ್ಟಪದಗಳ ಅರ್ಥ

## (ಸಂಖ್ಯೆಗಳು ಪದ್ಯಗಳವು)

೧ ಮುಕುರ—ಕನ್ನಡಿ ; ಮೈಮೆ—ಮಹಿಮೆ ; ಆಮೋದ—ಸಂತೋಷ.

೨ ದರ್ಪಣ—ಕನ್ನಡಿ ; ಬಿಂಬ—ನೆರಳು, ಪ್ರತಿಬಿಂಬ ; ಆಗಾರ—ಮನೆ.

೩ 'ಆವಾಸಿತಂ' ಆವ—ಯಾವ, ಅಸಿತಂ—ಕಪ್ಪಾದ ಎಂದರೆ ಅದೃಶ್ಯನಾದ ಪರಮಾತ್ಮ. ಮಾಯಾವಿ (ಅಥವಾ) ಆವಾಸಿತಂ—ವಾಸಿಸುವ ಅಂತರಾತ್ಮ. (ಈ ಪಕ್ಷದಲ್ಲಿ 'ನಿರವಿಸಿದನೋ' ಎಂಬಲ್ಲಿಗೆ ವಾಕ್ಯಪೂರ್ಣವಾಗುತ್ತದೆ.)

೪ ಭೂಮ—ಬಹುವಿಧ, ವಿಶಾಲ.

೫ ದ್ವಂದ್ವ ತರ್ಕ—ವಿರುದ್ಧವಾದ ತರ್ಕ.

೬ ತಿತ್ತಿ—ತಿದಿ, ಜಗ—ಜಗತ್ತು.

೭ ಪುರುಳು—ಸಾರವಾದ ಅರ್ಥ, ಅಭಿಪ್ರಾಯ.

೮ ಋತ—ಸತ್ಯ ; ತಣಿವು—ತಂಪು ; ತುಂತುರು—ಹನಿ.

೯ ಸುಗ್ಗು—ನಾಚಿಕೆ, ಸಂಕೋಚ.

೧೦ ಬಿನದ—ವಿನೋದ ; ನಿರ್ಝರಿ—ಹೊಳೆ ; ಮನನ—ಚಿಂತನೆ ; ಅನುಸಂಧಾನ—ಸ್ಮರಣೆ.

೧೧ ಬೆಂಗಡೆ—ಹಿನ್ನೆಲೆ ; ನಿರ್ವಹಿಪನ್—ನಿರ್ವಾಹಮಾಡತಕ್ಕವನು ; ನಿಷ್ಕ್ರಿಯ—ಕ್ರಿಯಾರಹಿತ.

೧೨ ಅಸು—ಪ್ರಾಣ ; ರಸವಿಸರ—ರಸದ ಹರಹು.

೧೩ ಕಲ್ಲೋಲಮುಖ—ಮೇಲ್ಗಡೆ ಅಲೆಗಳಿಂದ ಕೂಡಿದ್ದು.

೧೪ ಜೃಂಭಿಪುದು—ಸಂಚರಿಸುವುದು ; ಜೀವಾಳಿ—ಜೀವರಾಶಿ ; ಮಾಯಾನಿಲ—ಮಾಯೆಯೆಂಬ ಗಾಳಿ.

೧೫ ಚರಚರ್ಯ—ಚಂಚಲವಾದ.

೧೭ ಇರ್ಕೆ—ಇರುವಿಕೆ.

೧೮ ಕಡಲಾಡಿ—ಸಮುದ್ರದಲ್ಲಿ ಮುಳುಗಿ ಮುತ್ತು ಮೊದಲಾದ್ದನ್ನು ಹುಡುಕುವವನು.

೧೯ ಕ್ಷೋಣೀ—ಜಗತ್ತು ; ಮಾನುಷ್ಯ—ಮನುಷ್ಯಜನ್ಮ.

೨೦ ಕಾಲ್ವೆ—ಕಾಲುವೆ ; ವಾಗೀಶ—ಬ್ರಹ್ಮ ; ಲಕ್ಷ್ಮೀಶ—ವಿಷ್ಣು; ಗೌರೀಶ—ಶಿವ.

೨೧ ಬೀಡು—ಮನೆ.

೨೫ ವಿಭು—ವ್ಯಾಪಕ ; ನತಿ—ನಮಸ್ಕಾರ.

೨೬ ಸತ್ತ್ವ—ಸತ್, ಇರುವಂತಹದು ; ಮಣಿವಂ—ನಮಸ್ಕರಿಸೋಣ.

೩೦ ವಿಕಟ—ವಿಕಾರಿ, ಘೋರ.

೩೧ ಒಳ್ಗವಿತು—ಒಳಗೆ ಅಡಗಿಕೊಂಡು.

೩೨ ಚಿತ್ತು—ಚೈತನ್ಯ.

೩೩ ನಾನಿರದೆ—ನಾನು ಎಂಬ ಅಹಂಕಾರವಿರದೆ.

೩೪ ಲೀಲಾಪ್ತ—ಲೀಲೆಯಿಂದ ಕೂಡಿದ, ಲೀಲೆಯಿಂದ ಹಿತಕಾರಿಯಾದ.

೩೫ ಇರುವು—ಸತ್ ; ಮೆರೆವು— ಭಾನ, ಚಿತ್ ; ಅರಿವು – ಜ್ಞಾನ ; ಪೊರು — ಹೊರು (Support)

೩೬ ವಿಕ್ಷೇಪ—ವಿವಿಧ ಕಾರ್ಯ.

೩೭ ಬಿನ್ನಣಿಸು— ಪಾಂಡಿತ್ಯವನ್ನು ತೋರಿಸು ; ಚಿಣ್ಣ— ಬಾಲಕ.

೩೮ ಕುಶಿಕಜ—ವಿಶ್ವಾಮಿತ್ರ ; ಉರುಬು— ಅತಿಶಯ ; ರುಷೆ—ಸಿಟ್ಟು ; ರುಜಿನ—ಬೇನೆ ; ರಿಕ್ತತೆ— ಬಡತನ.

೩೯ ತವಿಸುಗೆ—ಸೊರಗಲಿ, ಪರಿತಪಿಸಲಿ ; ಧವ—ಗಂಡ ; ಕುವರ—ಮಗನಾದ ಅಭಿಮನ್ಯು ; ಫಲುಗುಣ—ಅರ್ಜುನ.

೪೦ ರಸಭಾಂಡ— ರಸತುಂಬಿದ ಪಾತ್ರೆ.

೪೧ ಮಾನ— ಜ್ಞಾನಕ್ಕೆ ಸಾಧನವಾದ ಇಂದ್ರಿಯ ; ಭಾನ—ಜ್ಞಾನ ; ಅಭಾನ—ಅಜ್ಞಾನ ; ಸೂನೃತ - ಸತ್ಯವೂ ಹಿತವೂ ಆದದ್ದು (ಪುಣ್ಯ); ಅಘ—ಪಾಪ.

೪೨ ಉದಧಿ— ಸಮುದ್ರ.

೪೩ ಪಾಂಥ—ದಾರಿ ; ನಿಚ್ಚಮುಂ—ಯಾವಾಗಲೂ.

೪೫ ಅಮೂರ್ತ—ರೂಪವಿಲ್ಲದ ; ಅಮೇಯ—ಅಜ್ಞೇಯ ;

ಮಹತ್ಪ್ರತಿನಿಧಿ—ಮಹತ್ತಿನ ಪ್ರತಿನಿಧಿ.

೪೬ ಪೃಥಕ್ತ್ವ—ಭಿನ್ನವಾಗಿರುವಿಕೆ.

೪೭ ಕೃತ್ಸ್ನದರ್ಶನ—ಪೂರ್ಣದರ್ಶನ.

೪೮ ಸರ್ವೋಹಮಿಂದೆ—ಸರ್ವವೂ ನಾನೆಂಬ ಭಾವನೆಯಿಂದ ;
ನಿರಹಂತೆ—ಅಹಂಕಾರರಾಹಿತ್ಯ.

೪೯ ಸ್ವಾಂತ—ಮನಸ್ಸು.

೫೧ ಊಟೆ—ನೀರಿನ ಚಿಲುಮೆ.

೫೨ ಅನವಧಿಕ—ಅವಧಿಯಿಲ್ಲದ, ಅನಾದಿ ; ಧುನಿ—ಹೊಳೆ ;
ಶೀಕರ—ತುಂತುರು ಹನಿ.

೫೩ ಮಾಲಾ ಪ್ರವಾಹ—ಸಾಲುಸಾಲಾಗಿ ಬರುವ ಪ್ರವಾಹ.

೫೫ ತಮಿಕೆ—ಕಾಣದಂತಹ ಕೆಳಕ್ಕೆ.

೫೬ ಅಳಿಯದೆ—ನಾಶವಾಗದೆ.

೫೮ ಅಘ—ಪಾಪ.

೬೧ ಮರಲು—ಹೂ ; ಅಲರು—ಹೂ ; ಪುರುಲು—ತಿರುಳು,
ಸಾರವಸ್ತು.

೬೩ ಸಂಗಮದನಕ—ಕೊಡುವವರೆಗೆ ; ವಂಗದ ಅಬ್ಧಿ—ಬಂಗಾಳಕೊಲ್ಲಿ.

೬೫ ಹೊನಲು—ಪ್ರವಾಹ.

೬೬ ನರಗಣ್ಯ ಭೇದಗಳ—ಮನುಷ್ಯರ ತಾರತಮ್ಯ ಭೇದಗಳನ್ನು.

೬೮ ಸ್ತೋಮ—ಸಮೂಹ ; ಘ್ರಾಣ—ಮೂಗು ;
ಅಪ್ಪಂತೆ—ಆಗುವಂತೆ ; ಇಳೆಬಾಳ್—ಲೋಕಜೀವನ.

೭೦ ಸ್ತೋಕಾಣು—ಚಿಕ್ಕದಾದ ಪರಮಾಣು.

೭೨ ಕರಣ—ಕ್ರಿಯಾಸಾಧನ ; ಕಾರಕ—ಕರ್ತೃ ; ಕ್ಷರ—ನಾಶವಾಗತಕ್ಕ ;
ಪರಿಮೇಯ—ತಿಳಿಯಲು ಸಾಧ್ಯ ; ಅಮೇಯ—ತಿಳಿಯಲು
ಅಸಾಧ್ಯ ; ಹರವು—ಎಣಿಕೆ, ಪ್ರಾಪ್ತಿ.

೭೭ ಒಡಲು—ದೇಹ.

೭೮ ಗೆಯ್ಮೆ—ಕ್ರಿಯೆ.

೭೯ ಬಾನ್—ಆಕಾಶ ; ಎಲರ್—ಗಾಳಿ ; ಸನಿಹ—ಸಮೀಪ ;
ಅನುಭಾವ—ಅನುಭವದಿಂದ ಸಿದ್ಧವಾದ.

೮೧ ಇರ್ತನ—ಎರಡಾಗಿರುವಿಕೆ ; ಮರ್ಮ—ರಹಸ್ಯ.

೮೨ ಮೇಧೆ—ಬುದ್ಧಿಶಕ್ತಿ.
೮೩ ಎಳಸು—ಬಯಸು.
೮೪ ಸೋಽಹಂ—ಪರಮಾತ್ಮನೇ ನಾನು ಎಂದು ;
ದಾಸೋಽಹಂ—ಪರಮಾತ್ಮನ ಸೇವಕ ನಾನು ಎಂದು.
೮೫ ಮರಲ್—ಹೂ ; ಕಾಷ್ಠತೆ—ಕಟ್ಟಿಗೆಯಾಗಿರುವಿಕೆ ;
ಮೃತ್—ಮಣ್ಣು ; ಶಿಲಾ—ಕಲ್ಲು ; ಸುಮ—ಹೂ ; ಕೃತಿ—ಧನ್ಯ.
೮೬ ರೋಧ—ದಡ ; ದ್ವೈಧ—ದ್ವೈತ ; ಅದ್ವೈಧ—ಅದ್ವೈತ.
೮೭ ಶ್ರೌತಾರ್ಥ—ವೇದದ ಅರ್ಥ.
೮೯ ಸೊಲ್ಲು—ಮಾತು ; ಉಲಿ—ಧ್ವನಿ, ಶಬ್ದ.
೯೨ ಏಗಳುಂ—ಯಾವಾಗಲೂ.
೯೩ ಮಾಪನ—ಅಳತೆ ; ಸ್ವೈರ—ಸ್ವತಂತ್ರ.
೯೪ ವಿಕ್ಷಣ—ಕ್ಷಣದ ಒಂದಂಶ.
೯೭ ಖೇಲನ—ಕ್ರೀಡೆ ; ಜಾಲ—ಬಲೆ.
೯೮ ನಗ—ಬೆಟ್ಟ.
೯೯ ಅವಗುಂಠಿತ—ಬಟ್ಟೆ ಮುಸುಕು ಹಾಕಿಕೊಂಡವನು.
೧೦೦ ಜಾಲ—ಮಾಯೆ.
೧೦೧ ರಜ್ಜು—ಹಗ್ಗ.
೧೦೨ ತ್ರಿಗುಣ—ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣ ;
ವೀತತರಂಗ—ಅಲೆಯಿಲ್ಲದ್ದು.
೧೦೫ ಭವ—ಸಂಸಾರ.
೧೦೬ ಹವಣು—ಪ್ರಯತ್ನ, ಕ್ರಿಯೆ.
೧೦೯ ತೊರೆ—ಹೊಳೆ.
೧೧೧ ಅನೂಹ್ಯ—ಊಹಾತೀತ.
೧೧೩ ಕಾಯಕ—ಕೆಲಸ ; ನಿಯತಿ—ದೈವ.
೧೧೫ ವಪು—ದೇಹ.
೧೧೬ ತೀರಿಪ್ಪುದಾರತೆ—ತೀರಿಸುವ ಔದಾರ್ಯ.
೧೧೮ ಕಿಂಪುರುಷ—ಕುದುರೆಯ ಮುಖವೂ ಮನುಷ್ಯಶರೀರವೂ ಇರುವ ದೇವತೆ. ಕಿಂನರ—ಮನುಷ್ಯಮುಖವೂ ಕುದುರೆಯ ಶರೀರವೂ ಇರುವ ದೇವತೆ. (ಈ ಎರಡು ಹೆಸರೂ ಒಂದೇ ಗುಂಪಿನ ದೇವತೆಗಳಿಗೆ ಇದೆ.

ಈ ಪದ್ಯದಲ್ಲಿ ಬೇರೆ ಬೇರೆ ಎಂದು ವಿಂಗಡಿಸಿಕೊಳ್ಳಲಾಗಿದೆ) ಪರಿರಂಭ—ಆಲಿಂಗನ ; ಅಶ್ವತನು—ಕುದುರೆ ಶರೀರದವನು ; ತುರಗಮುಖ—ಕುದುರೆ ಮುಖದವನು ; ಕರುಬು—ಹೊಟ್ಟೆಕಿಚ್ಚು.

೧೧೯ ತಾರಂಗ—ಅಲೆಗೆ ಸಂಬಂಧಿಸಿದ ; ವಿವೃತಿ—ವಿವರಣೆ ; ಸಮಜವತೆ—ಒಂದೇ ವೇಗ.

೧೨೦ ಇನ—ಸೂರ್ಯ ; ತೋರ್ಕೆ—ತೋರುವಿಕೆ.

೧೨೧ ನಾಭಿ—ಬಂಡಿಯ ನಡುವೆ ಇರುವ ಗುಂಬ ; ನೇಮಿ—ಗಾಲಿಯ ಸುತ್ತುಪಟ್ಟಿ ; ಅರ—ಅರೆಕಾಲು.

೧೨೨ ಮುಗಿಲು—ಮೋಡ.

೧೨೩ ಒಡರ್ಚು—ನಿರ್ಮಿಸು.

೧೨೪ ಭಾನುಗೋಲ—ಸೂರ್ಯಮಂಡಲ.

೧೨೫ ವರ್ತ್ಮ—ಮಾರ್ಗ ; ಪರಾವರ್ತಿತ—ಬದಲಾಯಿಸಿದ್ದು.

೧೨೬ ಸತ್ರ—ಛತ್ರ.

೧೨೭ ತೂಂಕಿಡು—ಅಲ್ಲಾಡಿಸು, ಇಳಿಬಿಡು ; ಆಂದೋಲನ—ಉಯ್ಯಾಲೆ.

೧೨೯ ಸಾಜ—ಸಹಜ.

೧೩೦ ಶಿಖಿ—ಬೆಂಕಿ ; ಆಂದೋಲನ—ತೂಗುವುದು, ತರ್ಕಿಸುವುದು ; ವಾಸ್ತುಶುದ್ಧಿ—ತಳಶೋಧನೆ ; ಆತ—ಒದಗಿದ.

೧೩೩ ಬೋನ—ಅನ್ನ ; ಅನುಕಂಪೆ—ದಯೆ.

೧೩೪ ಆಹುತಿಯಾದವನು ; ಭವಶಿಖಿ—ಸಂಸಾರವೆಂಬ ಅಗ್ನಿ ; ಸಾಹ್ಯ—ಸಹಾಯ.

೧೩೫ ದೃಷ್ಟಾತ್ಮತತ್ತ್ವ—ಆತ್ಮದರ್ಶನವನ್ನು ಪಡೆದ ಜ್ಞಾನಿ.

೧೩೬ ಪಾಂಸು—ಧೂಳಿ.

೧೩೭ ಕಾಮನೀಯಕ—ರಮಣೀಯತೆ ;. ಭ್ರಾಮಗತಿ—ಅಲೆತ.

೧೩೮ ನೆರೆದು—ಪೂರ್ಣವಾಗಿ.

೧೪೧ ಸಮಷ್ಟಿ—ಸಮುದಾಯ.

೧೪೩ ವೀಚಿ—ಅಲೆ ; ಊರ್ಮಿ—ಅಲೆ.

೧೪೪ ಮಹತ್—ಮಹತ್ ಎಂಬ ಬುದ್ಧಿತತ್ತ್ವ.

೧೪೫ ಕೋಡು—ತುದಿ (ಅರ್ಧಚಂದ್ರನು ಇಲ್ಲಿ ಪ್ರಸ್ತುತ).

೧೪೬ ಒಡಲು—ದೇಹ.

೧೪೭ ಎಸೆವುದು—ಪ್ರಕಾಶಿಸುವುದು ; ಅಪ್ಪುದು—ಪ್ರಿಯವಾಗುವುದು. (ಟಿಪ್ಪಣಿಯನ್ನು ನೋಡಿ).

೧೪೮ ಕರಿ—ಕರಿಕು ; ಉರಿ—ಬೆಂಕಿ.

೧೫೭ ಭರಿಪುದು—ಧರಿಸುವುದು ; ಆರ್ಪು—ಸಾಮರ್ಥ್ಯ.

೧೫೮ ನಯ—ನೀತಿ.

೧೫೯ ವೇಯ—ತಿಳಿಯಲು ಸಾಧ್ಯವಾದದ್ದು.

೧೬೨ ಅಕ್ಷಿ—ಕಣ್ಣು; ಮರೀಚಿಕೆ—ಬಿಸಿಲ್ಗುದರೆ (ಮರುಭೂಮಿಯಲ್ಲಿ ಸೂರ್ಯಕಿರಣ ನೀರಿನಂತೆ ಕಾಣುತ್ತದೆ ಅದು).

೧೬೩ ಕುಲುಕು—ಅಲ್ಲಾಡು.

೧೬೪ ಸಂಕ್ಷೋಭಿತ—ತಳಮಳ ; ಕಾಂಕ್ಷಿತ—ಬಯಕೆ ; ಧ್ವಾಂಕ್ಷ—ಕಾಗೆ.

೧೬೬ ಧುರ—ಯುದ್ಧ; ಹರಿಬ—ಹಂಚಿಕೆ, ಸಂಚು.

೧೬೭ ಅನುವರಿ—ಕ್ರಮವನ್ನು ತಿಳಿ.

೧೭೦ ನೇಯ—ನೆರವೇರಿಸಬೇಕಾದ್ದು, ಗುರಿ.

೧೭೩ ಆದಿಕವಿಗಳು—ಮಂತ್ರದ್ರಷ್ಟಾರರಾದ ಋಷಿಗಳು.

೧೭೪ ನಿಗಮ—ವೇದ ; ಅನುಗೂಡದನು—ಅನುಸರಿಸಿ ಹೋಗದವನು.

೧೭೫ ಪೊಡೆ—ಹೊಟ್ಟೆ.

೧೭೬ ಹೊರೆತ—ಹೊರೆ ಹೊರುವುದು.

೧೭೮ ಒಡಲು—ಶರೀರ ; ದ್ವಂದ್ವ—(ಸಂದೇಹ ಸಮಾಧಾನಗಳ) ಜೊತೆ.

೧೮೦ ದೃಷ್ಟವ್ಯ—ನೋಡಬೇಕಾದ್ದು; ರಸ್ಯಾನ್ನ—ಆಸ್ವಾದ್ಯವಾದ ಅನ್ನ.

೧೮೨ ಬಾನು—ಸೂರ್ಯ ; ಶಶಿ —ಚಂದ್ರ;. ಪ್ರತೀಕ—ಚಿಹ್ನೆ, ಪ್ರತಿಮೆ.

೧೮೪ ತನು—ಶರೀರ ; ಮಿನುಗುಗು—ಪ್ರಕಾಶಿಸುವುದು.

೧೮೭ ಬ್ರಾಹ್ಮಿಕ—ಬ್ರಹ್ಮಸಂಬಂಧಿ ; ಸಿಂಧು—ನದಿ ಅಥವಾ ಸಮುದ್ರ ; ಶೀಕರ—ತುಂತುರು ಹನಿ ; ಬಂದಿ—ಖೈದಿ.

೧೮೮ ಪರಮಾರ್ಥ—ಶ್ರೇಷ್ಠವಾದ ಪುರುಷಾರ್ಥ.

೧೮೯ ಭಟ್ಟಿಯುಪಾಯಕೆ—ಭಟ್ಟಿ ಇಳಿಸುವ ಉಪಾಯಕ್ಕೆ.

೧೯೦ ನೈಸರ್ಗ—ಪ್ರಕೃತಿ ; ಇನಿತು—ಸ್ವಲ್ಪ.

೧೯೧ ವಾಸನಾ—ಹಿಂದಿನ ಜನ್ಮದ ಸಂಸ್ಕಾರ ; ವಾಮ—ತಪ್ಪುದಾರಿ ; ಶೋಷಿಪ್ಪುದು—ಕ್ಷಯಿಸಬೇಕು ; ಹಟ—ಹಠಮಾರ್ಗ ;

ರಾಜ—ರಾಜಮಾರ್ಗ.

೧೯೨ ಸಂಸೃತಿ—ಸಂಸಾರ, ವ್ಯವಹಾರ.

೧೯೩ ಅರ್ಕಪ್ರಭೆ—ಸೂರ್ಯನ ಪ್ರಕಾಶ.

೧೯೪ ಬಾನ್—ಆಕಾಶ ; ದ್ವಂದ್ವ—ಸುಖದುಃಖಾದಿ ದ್ವಂದ್ವ.

೧೯೬ ಅಂಕೆ—ಹತೋಟಿಯ ಗುರುತು.

೧೯೭ ದ್ವಂದ್ವ—ಸುಖದುಃಖಾದಿ ದ್ವಂದ್ವ.

೧೯೮ ಸದ್ಯಸ್ಕ—ಈಗಿನ ಕಾಲದ ; ಖಾದ್ಯ—ಆಹಾರ ಪದಾರ್ಥ.

೧೯೯ ಕಾಚದೃಗ್ಯಂತ್ರ—ಗಾಜಿನ ಸೂಕ್ಷ್ಮದರ್ಶಕಯಂತ್ರ; ಲೋಚನ ಗ್ರಾಹ್ಯ—ಕಣ್ಣಿಗೆ ನಿಲುಕುವ ; ಉಪಮಿತಿ—ಹೋಲಿಕೆ ; ವಾಚಾಮಗೋಚರ—ಮಾತಿಗೂ ನಿಲುಕದಿರುವ ; ನಭಪಟ—ಆಕಾಶವೆಂಬವಸ್ತ್ರ.

೨೦೧ ಮುಗಿಲು—ಮೋಡ ; ಇನ—ಸೂರ್ಯ ; ಮಘವಂತ—ಇಂದ್ರ.

೨೦೪ ತನುಘಟ—ದೇಹವೆಂಬ ಗಡಿಗೆ.

೨೦೬ ಭೂಜ—ಮರ ; ಅಗೆ—ಮೊಳಕೆ ; ನನೆ—ಮೊಗ್ಗು ; ಸಾಜ—ಸಹಜ.

೨೦೮ ರೂಪಾಂತರಾಪ್ತಿ—ಬೇರೆ ರೂಪದ ಪ್ರಾಪ್ತಿ.

೨೦೯ ಎಲರು—ಗಾಳಿ ; ಸುರಭಿ—ಸುಗಂಧವುಳ್ಳ.

೨೧೧ ಅನುಪೂರ್ವಿಕಣ—ಅನುಸರಿಸಿ ಬಂದ ವೀರ್ಯಕಣ ; ವಿವೃತಿ—ವಿಸ್ತಾರ ; ಶುಕ್ರ—ವೀರ್ಯ ; ತನುವೃದ್ಧಿ—ದೇಹದ ಬೆಳವಣಿಗೆ.

೨೧೨ ಜ್ಞೇಯ—ತಿಳಿಯಬಹುದಾದ ವಸ್ತು; ನೇಯ—ಗುರಿ.

೨೧೪ ಉತ್ಥಾನ—ಔನ್ನತ್ಯ ; ಸಗ್ಗ—ಸ್ವರ್ಗ.

೨೧೬ ರುಜೆ—ನೋವು, ರೋಗ ; ಪೊಡೆ—ಹೊಟ್ಟೆ; ಅಘಮಲ—ಪಾಪದ ಕೊಳೆ.

೨೧೭ ಮುನಿ ವಸಿಷ್ಠನ ಪತ್ನಿ—ಅರುಂಧತಿ (ನಕ್ಷತ್ರ) ; ಉಡುಪಥ—ಆಕಾಶ.

೨೧೮ ಮರ್ಮಜ್ಞ—ಗುಟ್ಟು ತಿಳಿದಿರುವ.

೨೨೦ ದಂದುಗ—ತೊಂದರೆ ; ಉಬ್ಬೆಗ—ಚಿಂತೆ ; ದ್ವಂದ್ವ—ಸುಖ ದುಃಖಾದಿ ದ್ವಂದ್ವ.

೨೨೧ ಅನಿತರಜ್ಞತೆ—ಇನ್ನೊಂದಿದೆ ಎಂದು ತಿಳಿಯದಿರುವುದು.

೨೨೨ ಚಿತ್—ಅಂತಃಕರಣ ; ದೃಕ್—ನೋಡುವವನು ;
ದೃಶ್ಯ—ನೋಡಲ್ಪಡುವುದು ; ದರ್ಶನ—ನೋಟ.

೨೨೪ ಧಿಷಣೆ—ಬುದ್ಧಿ; ಅಕ್ಷಿ—ಕಣ್ಣು; ಒಂದೆ—ಸರಿಯಾಗಿ ಮೇಳವಿಸ
ಲಾಗಿ ; ಸಂವಿದಕ್ಷಿ—ಜ್ಞಾನನೇತ್ರ.

೨೨೯ ಸ್ವಾಂತ—ಚಿತ್ತ, ಮನಸ್ಸು.

೨೩೦ ಆರಾಮ—ತೋಟ.

೨೩೧ ಸ್ವಾಂತ—ಚಿತ್ತ, ಮನಸ್ಸು ; ಭೋಗಾಪ್ತಿ—ಭೋಗದ ಪ್ರಾಪ್ತಿ.

೨೩೨ ಉಡುರಾಜ—ಚಂದ್ರ ; ಬಾನ್—ಆಕಾಶ ; ಪೊಡವಿ—ಭೂಮಿ.

೨೩೩ ತರಣಿ—ಸೂರ್ಯ.

೨೩೪ ಅಂತರ್ಧನ—ಅಂತಃಕರಣಕ್ಕೆ ಸಂಬಂಧಿಸಿದ ತೃಪ್ತಿ ಮೊದಲಾದದ್ದು;
ಸ್ವಾಂತ—ಮನಸ್ಸು.

೨೩೫ ಶೃಂಖಲೆ—ಸಂಕೋಲೆ.

೨೩೬ ನೈಸರ್ಗಿಕ—ಸ್ವಾಭಾವಿಕ ; ಅಸಮ—ವಿಷಮ ;
ನರಬಹಿರ್ನಯ—ಮನುಷ್ಯನ ಬಾಹ್ಯ ವ್ಯಾಪಾರ.

೨೩೮ ವರ್ಗಸೋಪಾನ—ತಾರತಮ್ಯ ; ಭರ್ಗ—ಈಶ್ವರ.

೨೩೯ ಮುಗಿಲು—ಮೋಡ ; ಪರ—ಸ್ವರ್ಗ.

೨೪೦ ಅಹಂ—ಅಹಂಕಾರ ; ಅನಹಂ—ಅಹಂಕಾರರಾಹಿತ್ಯ.

೨೪೧ ಭರ್ಮ—ಸಂಬಳ ; ಧನನಯ—ಅರ್ಥಶಾಸ್ತ್ರ.

೨೪೩ ಪಲ್ಲವಿಸು—ವಿಸ್ತರಿಸು.

೨೪೪ ರೂಪನಿಯತಿ—ರೂಪನಿಯಮ ; ಗಾತ್ರಮಿತಿ—ದೇಹಪರಿಮಿತಿ.

೨೪೫ ಕಗ್ಗ—ಹರಟೆ ; ಹಸಾದ—ಪ್ರಸಾದ.

೨೪೬ ಜಕ್ಕಣ್ಣ—ಈ ಹೆಸರಿನ ಶಿಲ್ಪಿ; ದೇಗುಲ—ದೇವಸ್ಥಾನ ;
ಮನ್ನೆಯ—ಮಾನ್ಯ; ಸನ್ನೆ—ಸಂಕೇತ.

೨೪೭ ವಾಗ್ಗೇಯ—ಹಾಡುಗಾರಿಕೆ.

೨೪೮ 'ಬಡಜೀವ ದೇವನನು'—ಇಲ್ಲಿ 'ಪೂಜಿಸುವ ಬಗೆ' ಎಂದು
ಅಧ್ಯಾಹಾರ ಮಾಡಿಕೊಳ್ಳಬೇಕು

೨೪೯ ಮೆಲನೆ—ಮೆಲ್ಲನೆ ; ಅದುವರಂ—ಅಲ್ಲಿಯವರೆಗೆ.

೨೫೦ ಉಜ್ಜುಗಿ—ಕೆಲಸಗಾರ ; ಸದ್ಯಸ್ಕತಾತೋಷಿ—ಆ ಸಮಯದಲ್ಲಿರುವು
ದನ್ನು ನೋಡಿ ಸಂತೋಷಿನತಕ್ಕವನು.

೨೫೨ ಸದ್ಯ—ಆಯಾ ಸಮಯದಲ್ಲಿ ; ಸಾಸ—ಸಾಹಸ.
೨೫೪ ಮಾರುಲಿ—ಪ್ರತಿಧ್ವನಿ ; ತಿಂಗಳ್—ಬೆಳದಿಂಗಳು.
೨೫೬ ನಿಚ್ಚಂ—ಯಾವಾಗಲೂ.
೨೫೮ ಉರ—ಹೃದಯ ; ಒರೆ—ಹೇಳು.
೨೬೦ ವಿಷ್ಣುಪದ—ಕೈವಲ್ಯ.
೨೬೧ ಉಬ್ಬೆಗ—ಸಂತಾಪ.
೨೬೨ ತಂದ್ರಿ—ಆಲಸ್ಯ; ಸಾಂದ್ರ—ಗಾಢ.
೨೬೩ ಉರ—ಹೃದಯ.
೨೬೪ ಗುಹ್ಯ—ಗುಪ್ತ ; ಲವಗಾಹ್ಯ—ಕೊಂಚ ತಿಳಿಯಬಹುದಾದದ್ದು.
೨೬೫ ಪುರುಳ್—ನಿಲುಕುವ ವಸ್ತು.
೨೬೬ ಅಲಿಪ್ತ—ಅಸೂಯೆಯನ್ನು ತೊರೆದ ವಿರಕ್ತ.
೨೬೭ ಪೈತ್ರ—ಪಿತೃದೇವತೆಗಳಿಗೆ ಸಂಬಂಧಿಸಿದ ; ವಾಯಸ—ಕಾಗೆ.
೨೬೯ ಮುದುಕ—(ಮುಪ್ಪು).
೨೭೦ ಪಟ್ಟೆತಲೆ—ಬೋಳುತಲೆ.
೨೭೪ ಅಹಂತೆ—ಅಹಂಕಾರ.
೨೭೭ ಮಮತಾ—ನನ್ನದೆಂಬ ಅಭಿಮಾನ.
೨೭೮ ರಸನೆ—ನಾಲಗೆ.
೨೮೧ ಅಹಂಮತಿ—ಅಹಂಕಾರ.
೨೮೩ ಸ್ವರ್ಣಗರ್ಭ—ಹಿರಣ್ಯಗರ್ಭ (ಬ್ರಹ್ಮ).
೨೮೫ ಅರುಣ—ಸೂರ್ಯ; ಮಲರು—ಹೂ ; ನಿರಹಂತೆ—ಅಹಂಕಾರ ರಾಹಿತ್ಯ.
೨೮೬ ಮಲರು—ಹೂ ; ಅಲರು—ಗಾಳಿ ; ಅರಲು—ಹೂ.
೨೮೮ ಸೊಡರು—ದೀಪ ; ಪಾರುಗಣೆ—ನೆಗೆಯುವುದಕ್ಕೆ ಅನುಕೂಲವಾದ ಬಿದಿರಿನ ಗಳ.
೨೯೦ ಜಳಕ—ಸ್ನಾನ.
೨೯೧ ಶ್ಯಾಮಸುಂದರ—ಶ್ರೀಕೃಷ್ಣ ; ವಿಷಮಸಮಯ—ಸಂಕಟಕಾಲ.
೨೯೨ ಮುಗಿಲು—ಆಕಾಶ.
೨೯೩ ಮಾತಂಗಡಿಯ—ಮಾತು+ಅಂಗಡಿಯ ;
ಯಾತನಿರ್ಯಾತ—ಹೋಗುವುದು ಬರುವುದು ಎಂಬ ಕೆಲಸ.

೨೯೫ ಸುಳಿವಹುದು—ಅರ್ಥವಾಗುವುದು.

೨೯೭ ಕಾಕಾಕ್ಷಿ—ಕಾಗೆಯ ಕಣ್ಣು ; ಯುಗ—ಜೊತೆ.

೨೯೮ ಜಸ—ಯಶಸ್ಸು.

೩೦೦ ಆತುರಿಸದನ್ನು—ತ್ವರೆಮಾಡದವನು ; ಪಾಲುಮಾರದನು—ಸೋಮಾರಿಯಲ್ಲದವನು.

೩೦೧ ಶಿಷ್ಟ—ನಿಯಮನ.

೩೦೩ ದಾಯ—ಆಸ್ತಿ.

೩೦೪ ಕರಟಿ—ಕರುಕಾಗಿ, ಬೆಳವಣಿಗೆ ತಪ್ಪಿಹೋಗಿ.

೩೦೬ ಸಂನ್ಯಾಸದಾಭಾಸಿ—ಸಂನ್ಯಾಸಿಯಂತೆ ಕಾಣತಕ್ಕವನು ; ಪಾರ್ಥ—ಅರ್ಜುನ.

೩೦೭ ತರುವಲ್ಕ—ಮರದ ತೊಗಟೆ ; ಮಕರಂದ—ಹೂವಿನ ರಸ.

೩೦೯ ವಿಧಾತ—ಬ್ರಹ್ಮ ; ಪೆಣಗು—ಹೆಣಗು.

೩೧೧ ಉಚ್ಛ್ವಸನ—ಉಸಿರು ; ಹಸನ—ನಗು ; ದ್ವಂದ್ವ—ಬೇರೆಬೇರೆ.

೩೧೩ ಸೀಮೆ—ಗಡಿ ; ನೇಮಿ—ಗಾಲಿಯ ಸುತ್ತುಬಳೆ ;
ನಾಭಿ—ಗಾಡಿಯ ಗುಂಬ ; ನಭ—ಆಕಾಶ ; ಸ್ಥೇಮಿ—ಸ್ಥಿರ.

೩೧೪ ಅಧಿಪುರುಷ—ಪುರುಷೋತ್ತಮ.

೩೧೫ ನಿರ್ದ್ವಂದ್ವ—ಸುಖದುಃಖಾದಿದ್ವಂದ್ವರಹಿತ.

೩೧೬ ಏಸು—ಎಷ್ಟು ; ಪಂಜು—ದೀವಟಿಗೆ.

೩೧೭ ಪಾಲು—ಹಾಲು (ಆಹಾರ) ; ರೋದನೆ—ಅಳುವಿಕೆ ;
ನಿವೃತ್ತಿ—ಪರಿಹಾರ.

೩೧೮ ಪಟಲ—ಪೊರೆ ; ಪೆರ್ಮೆ—ಹಿರಿಮೆ.

೩೨೦ ತ್ರಿತಯ—ಮೂರು.

೩೨೧ ವೇಧಿಸು—ಚುಚ್ಚು.

೩೨೩ ಅಭಯ—ಭಯರಹಿತನಾದ ಈಶ್ವರ.

೩೨೫ ಸಾಜ—ಸಹಜ ; ಪಾದ ಬಿಡುವಕ್ಷಿ ಬಿಗಿ—ಕಾಲುಚಾಚುವಾಗ
ಕಣ್ಣನ್ನು ಹಿಡಿತದಲ್ಲಿಟ್ಟುಕೊ.

೩೨೯ ಸುರಪಚಾಪ—ಕಾಮನಬಿಲ್ಲು.

೩೩೦ ತರಣಿ—ಸೂರ್ಯ ; ಒಡಲು—ದೇಹ ; ವೆಯ—ವ್ಯಯ ;
ಕೊರೆ—ಕೊರತೆ.

೩೩೧ ರುಜಿತಾತ್ಮ—ಬಾಧೆಗೆ ಒಳಗಾದವನು ; ವಿಭ್ರಾಂತಿ—ಭ್ರಮೆ.

೩೩೩ ವಿಶ್ವಕಾಯ—ವಿಶ್ವವೇ ಶರೀರವಾಗಿರುವ ದೇವರು ; ಮಿತಿ—ತಿಳಿವು.

೩೩೪ ಅದಿರದು—ಅಲ್ಲಾಡದು.

೩೩೫ ಅಂತರದ—ಒಳಗಡೆಯ.

೩೩೬ ಸಿಕ್ಕು—ತೊಡಕು.

೩೪೦ ಕುಳಿಯೊಳಕ್ಕೆ—ಗುಳಿಯೊಳಗೆ.

೩೪೧ ಬಿಸದ—ವಿನೋದ.

೩೪೨ ನಿಕೃತಿ—ವಂಚನೆ.

೩೪೩ ವಿಗತಿ—ಹಿಂದೋಟ ; ವೆಗಡು—ಸೀಕಲು ವಾಸನೆ.

೩೪೪ ಕರಡಾಗಿ—ಬಡಕಲಾಗಿ, ಒಣಗಿ.

೩೪೫ ತರಣಿ—ಸೂರ್ಯ ; ಶಶಿ—ಚಂದ್ರ ; ಅದಿರು—ಅಲ್ಲಾಡು ; ಚರ—ಸರಿಯಾದ ದಾರಿಯಲ್ಲಿ ಸಂಚರಿಸುವ ; ವಿಚಾರ—ತಪ್ಪು ದಾರಿಯಲ್ಲಿ ತಿರುಗುವ.

೩೪೬ ನುಕ್ಕಾದೊಡಂ—ಹರಿದುಹೋದರೂ ; ತಂತು—ದಾರ.

೩೪೭ ವಾಂಛೆ—ಆಸೆ.

೩೪೮ ಸಾಂತ—ಅಂತವುಳ್ಳದ್ದು.

೩೪೯ ತಂತುಕಾರಳು—ನೂಲು ತೆಗೆಯುವವಳು.

೩೫೦ ಸ್ವಾಗಿತ—ಮನಸ್ಸು ; ನಿಶ್ರೇಣಿ—ಏಣಿ ; ಪಟುತರ—ಉತ್ತಮ.

೩೫೧ ಸನ್ನಿಭತೆ—ಹೋಲಿಕೆ.

೩೫೨ ವದನರುಚಿ—ಬಾಯಿ ರುಚಿ ಅಥವಾ ಮಾತಾಡುವುದರಲ್ಲಿ ಅಭಿರುಚಿ ; ವಿಪರ್ಯಯ—ವಿಪರ್ಯಾಸ ; ವಿದಿತ—ಗೊತ್ತು.

೩೫೩ ಲಾಸ್ಯ—ನೃತ್ಯ ; ದಿದೃಕ್ಷು—ನೋಡತಕ್ಕವನು ; ವಿಪರ್ಯಸ್ಯ—ವಿಪರೀತತೆ.

೩೫೪ ನವನವೋನ್ಮೇಷ—ಹೊಸಹೊಸ ರಂಗು ; ಅವುರು—ಒದಗು ; ವಿವೃತಿ—ವಿವರಣೆ ; ವಿವರ್ಶಿತ—ಬದಲಾಯಿಸಲ್ಪಟ್ಟದ್ದು.

೩೫೫ ಬೇಟ—ಕಾಮಲಾಲಸೆ.

೩೫೬ ಅಳ್ತಿ—ಪ್ರೀತಿ ; ಅಣುಗ—ಬಾಲಕ.

೩೫೭ ಉರುಕಾಲ—ಬಹಳ ಹೊತ್ತು.

೩೫೮ ರಹಸಿಯ—ರಹಸ್ಯ ; ವಿಕಟ—ಅಮೃತ, ವಿಲಕ್ಷಣ.

೩೫೯ ಸೂತ್ರಧರ—ಸೂತ್ರಧಾರಿ, ನಾಟಕದ ವ್ಯವಸ್ಥಾಪಕ.

೩೬೦ ಪಾಟವ—ಜಾಣ್ಮೆ.

೩೬೧ ತೋಷಣ—ಸಂತೋಷಪಡಿಸುವುದು.

೩೬೨ ಮಾರ—ಮನ್ಮಥ.

೩೬೩ ಸರಣಿ—ಮಾರ್ಗ.

೩೬೪ ವಿಕ್ಷೇಪ—ಚಲನೆ ; ಮೇಯ—ಜ್ಞೇಯ ; ಮಾಪಕ—ಜ್ಞಾತೃ, ನೋಡುವವನು.

೩೬೬ ನಲುಮೆ—ಸಂತೋಷ ; ಲಲಿತ—ಸೌಂದರ್ಯ.

೩೬೭ ಕೂಲ—ದಡ ; ಊರ್ಮಿ—ಅಲೆ.

೩೬೯ ಅಜ—ಹುಟ್ಟದಿರುವ, ಅನಾದಿ ; ಮೃಜಿತ—ಪರಿಶುದ್ಧ.

೩೭೦ ಕಲ್ಲೋಲ—ದೊಡ್ಡ ಅಲೆ ; ನೆಲ್ಲು—ಭತ್ತ.

೩೭೧ ವಿಯತ್—ಆಕಾಶ.

೩೭೨ ಅರಿ—ವೈರಿ ; ವಿಭು—ಒಡೆಯ

೩೭೩ ಸುರಭಿ—ಸುವಾಸನೆ.

೩೭೪ ಅರುಣಿಮೆ—ನಸುಗೆಂಪು ; ಹರಿತ—ಹಸಿರು ; ಶಾದ್ವಲ—ಹುಲ್ಲುಗಾವಲು ; ತಾಮ್ರ—ಕೆಂಪು.

೩೭೫ ಆಗಸ—ಆಕಾಶ ; ಖಗ—ಹಕ್ಕಿ ; ಉಡ್ಡೀನ—ಹಾರಾಟ ; ಊರ್ಮಿ—ಅಲೆ ; ಮಾಗುರು—ಮಹಾಗುರು.

೩೭೬ ರೋಚಕ—ಆಕರ್ಷಕ ವಸ್ತು.

೩೭೭ ಅರುಮೆ—ಸ್ನೇಹ.

೩೭೮ ವಿಗಡತೆ—ಕ್ರೂರತೆ ; ಗೃಹಿತೆ—ಗೃಹಸ್ಥನಾಗಿರುವುದು.

೩೭೯ ಪ್ರತ್ಯಹ—ಪ್ರತಿದಿನ ; ಕೃತ್ಯ—ಕರ್ತವ್ಯ.

೩೮೨ ಅಮೇಯ—ಅಜ್ಞೇಯ.

೩೮೪ ಪಳ್ಳಿ—ಹಳ್ಳಿ.

೩೮೫ ನಿಷ್ಕೃತಿ—ಋಣವಿಮೋಚನೆ ; ಸಂಧಾನ—ಏರ್ಪಾಡು.

೩೮೬ ಕಾರಿರುಳು—ದಟ್ಟವಾದ ರಾತ್ರಿ.

೩೮೭ ಚಿತ್—ಚೈತನ್ಯ.

೩೮೮ ಮಲರು—ಹೂ ; ಅರಲು—ಹೂ.

೩೮೯ ಕರುಮ—ಕರ್ಮ.

೩೯೦ ಪೊಡವಿ—ಭೂಮಿ.

೩೯೧ ಒಗೆ—ಹೊರಡು, ಹುಟ್ಟು ; ಆರಲ್—ಹೂ ; ಸುರಭಿ—ಪರಿಮಳ.

೩೯೨ ಅಡಿ—ಹೆಜ್ಜೆ.

೩೯೫ ಲಬ್ಧ—ದೊರಕಿದ್ದು.

೩೯೬ ಧಾತ—ಬ್ರಹ್ಮ ; ಮಾನಿಸ—ಮನುಷ್ಯ ; ಬಾನ್—ಆಕಾಶ ; ತಾಣ—ಸ್ಥಾನ.

೪೦೨ ಕಡಲು—ಸಮುದ್ರ.

೪೦೫ ಅರೆಬಾಳು—ಅರ್ಧವಾದ ಬಾಳು.

೪೦೬ ಸಂಸರ್ಗ—ಸಂಬಂಧ ; ಅನವರತ—ಸದಾ.

೪೦೭ ಭಾನು—ಸೂರ್ಯ ; ನಿಯತ—ನಿಯಮಕ್ಕೆ ಒಳಪಟ್ಟ ; ಆವರ್ತನೆ—ಸುತ್ತು ; ಕಾಲಯೋನಿ—ಕಾಲಗರ್ಭ.

೪೦೯ ಸಾಂತ—ಅಂತ್ಯವುಳ್ಳ ; ಸ್ವಾಂತ—ಮನಸ್ಸು ; ಅರಿದು—ತಿಳಿಯದು ; ತಂತು—ನೂಲು ; ಪಟ—ವಸ್ತ್ರ.

೪೧೦ ಅಂದ—ರೀತಿ.

೪೧೧ ವ್ಯತ್ಯಯ—ವ್ಯತ್ಯಾಸ ; ವೀಥಿ—ಪಥ ; ರಥ್ಯೆ—ರಸ್ತೆ ; ಅನುಚಣ—ಪ್ರತಿಕ್ಷಣದಲ್ಲಿ.

೪೧೩ ಸಾಜ—ಸಹಜ ; ಒಳ್ಳಿತನು—ಒಳ್ಳೆಯದನ್ನು ; ಬಿಡಿನರ—ಪ್ರತ್ಯೇಕ ವ್ಯಕ್ತಿ.

೪೧೪ ವಿನಿಮಯ ನ್ಯಾಯ—ಕೊಟ್ಟುಕೊಳ್ಳುವ ನ್ಯಾಯ ; ಅನುವಹುದು—ಸಿದ್ಧವಾಗಬೇಕು.

೪೧೫ ಅಸಮತೆ—ಹೆಚ್ಚು ಕಡಿಮೆ ; ಸ್ವಸ್ತಿ—ಕ್ಷೇಮ ; ಕರಣ—ಸಾಧನ.

೪೧೬ ಸುಧೆ—ಅಮೃತ.

೪೧೯ ಬೇಗೆ—ತಾಪ ; ಮಾಗಾಯಿ—ಮಾವಿನಕಾಯಿ.

೪೨೦ ಕ್ಷಾಲಕ—ತೊಳೆಯತಕ್ಕದ್ದು.

೪೨೨ ಹುರುಡು—ಪೈಪೋಟಿ ; ಸೊದೆ—ಅಮೃತ ; ತರಗು—ಒಣಗು.

೪೨೩ ಸೌರಭ—ಸುಗಂಧ.

೪೨೬ ಸುಯ್ಲು—ನಿಟ್ಟುಸಿರು ; ಜಳಕ—ಸ್ನಾನ.

೪೨೭ ಹೊನಲ್—ಹೊಳೆ ; ಜವುಗು—ಬಗ್ಗಡ ; ವೆವಸಾಯ—ಕೃಷಿ.

೪೨೮ ತಿಕ್ತ—ಕಹಿ ; ಆಮ್ಲ—ಹುಳಿ ; ಕಟು—ಕಾರ.

೪೩೦ ಸೋಪಾನ—ಮೆಟ್ಟಲು.

೪೩೧ ಮುಡಿತ—ಸಾವು.

೪೩೨ ರಥ್ಯ—ರಥಸಂಬಂಧಿಯಾದ.

೪೩೩ ಮಾರ್ಪಾಟು—ಬದಲಾವಣೆ.

೪೩೪ ಭಾಸ್ವತ್—ಸೂರ್ಯ ; ಇಳೆ—ಭೂಮಿ ; ನಿಚ್ಚಮುಂ—ಯಾವಾಗಲೂ.

೪೩೫ ಜವ—ಯಮ ; ಉಜ್ಜುಕೆ—ಉಜ್ಜುಗಲ್ಲು, ಉಜ್ಜುವಿಕೆ.

೪೩೬ ಕುಟುಕ—ಕುಟುಕುವಂತಹದು ; ಕಿರಕು—ಕೂಗಾಟ, ಕೊಳೆ.

೪೩೭ ಚರಮಾಂಕ—ಕಡೆಯ ಅಂಕ ; ವಿಷ್ಕಂಭ—ನಾಟಕದಲ್ಲಿ ಹಿಂದೆ ನಡೆದ ಮತ್ತು ಮುಂದೆ ನಡೆಯುವ ವಿಷಯವನ್ನು ಸೂಚಿಸುವ ಕಥಾಂಶ ; ಖರ—ಕತ್ತೆ ; ಭುವಿ—ಭೂಮಿ.

೪೩೮ ಏಟು ಪೋಟುಗಳು—ಹೊಡೆತಗಳು.

೪೩೯ ಶಬಲ—ಮಿಶ್ರವರ್ಣ ; ಕ್ಷ್ವೇಲ—ವಿಷ ; ಸುಧೆ—ಅಮೃತ.

೪೪೦ ಅರುಣೋದಯ—ಸೂರ್ಯೋದಯ.

೪೪೧ ವೈಕಲ್ಪ—ಸಂಶಯ.

೪೪೨ ಕರವಾಳ—ಕತ್ತಿ ; ಒಡಲು—ದೇಹ.

೪೪೩ ಸುರೆ—ಮದ್ಯ ; ಸುಧೆ—ಅಮೃತ.

೪೪೪ ತದಿದಂ—ಅದೇ ಇದು.

೪೪೫ ಅಹಿ—ಸರ್ಪ.

೪೪೬ ವ್ಯಷ್ಟಿ—ಬಿಡಿಪದಾರ್ಥ, ವ್ಯಕ್ತಿ ; ಸಮಷ್ಟಿ—ವ್ಯಕ್ತಿಸಮುದಾಯ.

೪೪೯ ವ್ಯರ್ತ—ವ್ಯರ್ಥ ; ರಿಕ್ತ—ಶೂನ್ಯ.

೪೫೦ ಶಿಷ್ಟ—ಉಳಿದದ್ದು.

೪೫೨ ಎಸಕ—ರಚನೆ.

೪೫೩ ವ್ಯಷ್ಟಿ, ಸಮಷ್ಟಿ—ಇವುಗಳ ಅರ್ಥಕ್ಕೆ ೪೪೬ ನೋಡಿ : ಶಿಷ್ಟ—ಉಳಿದದ್ದು.

೪೫೪ ಕುರುಡೆರಕ—ತಿಳಿಯದೆ ಕೂಡಿಸುವುದು ; ಎರಕ—ರಚನೆ.

೪೫೫ ಪುರುಳು—ಪದಾರ್ಥ.

೪೫೬ ೪೪೬ನ್ನು ನೋಡಿ ; ಅಪ್ಪುಕಂ—ಅವೆಲ್ಲಕ್ಕೆ.

೪೫೭ ಒರತೆ—ನೀರು ಜಿನುಗುವುದು.

೪೫೮ ಅಷ್ಟವಕ್ರ—ವಿಕಾರರೂಪಿನ ಒಬ್ಬ ಋಷಿ.
೪೫೯ ಶಾಲೆ—ಶಲ್ಯ, ಶಾಲು.
೪೬೯ ನಿಟಿಲ—ಹಣೆ.
೪೬೧ ಇನಿವಣ್ಣು—ಸಿಹಿಯಾದ ಹಣ್ಣು ; ಅಜ—ಬ್ರಹ್ಮ.
೪೬೩ ಜಸ—ಯಶ ; ರಾಮಣೀಯಕ—ಸೌಂದರ್ಯ.
೪೬೪ ಆಯ—ಪರಿಮಿತಿ ; ಮೇಯ—ಜ್ಞೇಯ ;
ದುಗುಲ—ದುಕೂಲ, ಸೀರೆ ; ಒಯ್ಯರ—ಒಯ್ಯಾರ,
೪೬೫ ಕಳೆ—ಗೆಳೆಯ ; ಹೇಯ—ತ್ಯಾಜ್ಯ.
೪೬೬ ಆಯ—ಲಾಭದ ಉದ್ದೇಶ ; ಹೇಯ—ಕೆಟ್ಟದ್ದು.
೪೬೭ ಪೇಯ—ಕುಡಿಯಲು ಅರ್ಹ ; ಪ್ರೇಯ—ಪ್ರೀತಿ.
೪೬೮ ಮೇಯತೆ—ಜ್ಞೇಯತೆ ; ಭಾಸ—ತೋರಿಕೆ.
೪೭೦ ಕದಪು—ಕೆನ್ನೆ.
೪೭೧ ಆನಾಯ—ಬಲೆ.
೪೭೨ ಮಾಯಾತ್ಯಯಿತೆ—ಮಾಯೆಯನ್ನು ದಾಟುವುದು.
೪೭೩ ಆರಾಮ— ತೋಟ.
೪೭೫ ಅನು—ಹೊಂದು.
೪೭೯ ಸಿಂಧು—ಸಮುದ್ರ.
೪೮೦ ಭೇಕ—ಕಪ್ಪೆ ; ಪ್ಲುತ—ಕುಪ್ಪಳಿಸುವುದು ; ಕೌಶಿಕ—ವಿಶ್ವಾಮಿತ್ರ ;
ಮಧು—ಜೇನು.
೪೮೨ ಸಾಕೂತ—ಅಭಿಪ್ರಾಯ ಸಹಿತವಾಗಿ ; ಜಾನಿಸು—ಧ್ಯಾನಿಸು.
೪೮೩ ಮೊಗ—ಮುಖ.
೪೮೭ ಚಟುಲ—ಚುರುಕಾದ.
೪೮೯ ಅಂತಕಳು—ನಾಶಕಳು.
೪೯೦ ಧೀವಿಕಲ—ಬುದ್ಧಿಹೀನ ; ಜಾಗಿನ—ಕಾಣಿಕೆ, ಉಡುಗೊರೆ.
೪೯೨ ಕಾಕು—ಕೊಂಕುನುಡಿ ; ಬಿರುಬು—ಬಿರಸು.
೪೯೪ ಅರೆ—ಅರ್ಧ ; ಇಮ್ಮಡಿ—ಎರಡರಷ್ಟು.
೪೯೫ ಕಾಕುತ್ಸ್ಥ—ಶ್ರೀರಾಮ.
೪೯೭ ಮರ್ತ್ಯ—ಮನುಷ್ಯ ; ಅಮರ್ತ್ಯ—ದೇವ ;
ಅಮರಸುಮ—ಪಾರಿಜಾತ ; ವ್ಯತ್ಯಯಾಭಾಸ—ವಿರೋಧಾಭಾಸ.

೪೯೮ ಉಡುಗೋಲ—ನಕ್ಷತ್ರಲೋಕ ಅಥವಾ
ಉಡುಗೋಲು—ಕಸಬರಿಗೆ.

೪೯೯ ಬಾನ್—ಆಕಾಶ.

೫೦೦ ರನ್ನ—ರತ್ನ ; ತಲ್ಲಣ—ಹೆದರಿಕೆ, ತಳಮಳ.

೫೦೩ ನ್ಯಕ್ಕೃತಾಕ್ಷಿ—ಅಕ್ಷಪಾದ, ಗೌತಮ (ಟಿಪ್ಪಣಿ ನೋಡಿ).

೫೦೫ ಸಾಸ—ಸಾಹಸ ; ಶಿಷ್ಟ—ಸಜ್ಜನ.

೫೦೬ ತೀವ್ರ—ಹರಡು.

೫೦೭ ಜನಿ—ಹುಟ್ಟು ; ಬಿನದ—ವಿನೋದ.

೫೦೮ ಸಾಳೀಕ—ಸುಳ್ಳು.

೫೧೦ ಚಕ್ರ—ಗಾಲಿ ; ಅಕ್ಷ—ಅಚ್ಚು—ನಾಭಿ—ಗುಂಬ ; ಶಕ್ರಧನು—
ಕಾಮನಬಿಲ್ಲು ; ಉಪರಾಗ—ಗ್ರಹಣ ; ನಿಯತಿ—ನಿಯಮ.

೫೧೧ ಕಂದುಕ—ಚೆಂಡು.

೫೧೨ ತ್ರಿಜಟೆ—ಮೂರು ಜಡೆಯುಳ್ಳದ್ದು (ಮೂರು ಚಾಟಿಯುಳ್ಳದ್ದು)
ಕಶೆ—ಚಾಟಿ ; ಅಜಗೂಢ—ದೈವರಹಸ್ಯ ; ಅಮರು—ಅಮುಕು ;
ವಿಜಿಗೀಷುತೆ—ಜಯದ ಇಚ್ಛೆ.

೫೧೪ ಎಳಸಿಕೆ—ಆಸೆ ; ಮೊಳೆ—ಮೊಳಕೆ.

೫೧೫ ಒಡವೆರೆದು—ಜೊತೆಗೆ ಸೇರಿ ; ಕೂಟು—ಒಂದು ಬಗೆಯ
ಮೇಲೋಗರ.

೫೧೬ ವ್ಯೋಮ—ಆಕಾಶ.

೫೧೭ ಅಂಕುರ—ಮೊಳಕೆ ; ಸರಣಿ—ದಾರಿ.

೫೧೮ ಇನಿತು—ಸ್ವಲ್ಪ (ಈ ಪದ್ಯದ ವಿವರಣೆ ಮುಂದಿನ ಪದ್ಯದಲ್ಲಿದೆ).

೫೧೯ ಭುವಿ—ಭೂಮಿ ; ಜವರಾಯ—ಯಮ ; ಕಳೇಬರ—ದೇಹ ;
ವಸುಂಧರೆ—ನೆಲ.

೫೨೦ ದಾಯ—ಸಂದಾಯ.

೫೨೧ ಸ್ವೈರ—ಸ್ವೇಚ್ಛೆಯ ; ಪ್ರಲೋಭನ—ಆಸೆಹುಟ್ಟಿಸುವುದು.

೫೨೨ ಪ್ರಜಾಸೃಷ್ಟಿ—ಪ್ರಜೆಗಳು ಮಾಡಬೇಕಾದ ನಿರ್ಮಾಣ.

೫೨೪ ಬೀಳು—ಹಾಳು.

೫೨೫ ಪರಿಗೂಢ—ರಹಸ್ಯವಾದ.

೫೨೭ ಮೃಡ—ಈಶ್ವರ ; ಒಡಲು—ದೇಹ ; ಪೊಡವಿ—ಜಗತ್ತು.

೫೨೯ ಇನ—ಸೂರ್ಯ; ಶಶಿ—ಚಂದ್ರ; ಇಳೆ—ಭೂಮಿ.

೫೩೦ ಅಲೆಗಳೆಯೆ—ಅಲೆಯಿರುವ ನೀರಿಗೆ ಎಳೆದರೆ; ಕುಳಿ—ಗುಳಿ.

೫೩೧ ರೂಪ್ಯಕ—ಬೆಳ್ಳಿ.

೫೩೨ ಅಮೇಯ—ಅಜ್ಞೇಯ; ಪರಿಧಿ—ಗಡಿ, ಅವಧಿ.

೫೩೩ ಕ್ಷೋಣಿ—ಭೂಮಿ; ಪರ್ಯಾಯಣ—ಸುತ್ತುವಿಕೆ; ಪರ್ಯಾಪ್ತ—ಸಮರ್ಥ.

೫೩೪ ಸಂದರ್ಶಕ—ನೋಡುವ.

೫೩೫ ಅಯಮ—ಹತೋಟಿ ಮೀರುವುದು; ಉತ್ಥ—ಹುಟ್ಟಿದ; ಪ್ರಚಯ—ಸಮೂಹ; ಸ್ಮಯ—ವಿಸ್ಮಯ.

೫೩೬ ಕಿಣ್ವ—ದೋಷ; ಗಹ್ವರ—ಕಂದಕ, ಆಳ.

೫೩೮ ದ್ವಿತಯಃಭಾವ—ಜರಡು ಎಂಬ ಭಾವ.

೫೩೯ ಪರಿಪಂಥ—ಹಗೆತನ; ಪೊಣರು—ಹೋರಾಡು; ಇರುತನ—ಎರಡೆಂಬ ಭಾವನೆ.

೫೪೦ ಇನಿರಸ—ಸಿಹಿಯಾದ ರಸ.

೫೪೨ ಉರ್ವರೆ—ಭೂಮಿ; ನಿರ್ವಿಣ್ಣತೆ—ವೈರಾಗ್ಯ, ಬೇಸರ.

೫೪೩ ಪದ—ಕಾಲು; ಅದಿರದ—ಹೆದರದ.

೫೪೪ ಬಾಡಬ—ಬಡಬಾಗ್ನಿ; ಪ್ರಾಕ್ಕೃತ—ಹಿಂದೆ ಮಾಡಿದ ಕರ್ಮ; ನಿಗಳ—ಸಂಕೋಲೆ.

೫೪೫ ಚೋದಕ—ಪ್ರೇರಕ, ನಾಯಕ.

೫೪೬ ಸೊಗ—ಸುಖ; ದುಗುಡ—ದುಃಖ.

೫೪೭ ಸಾಸ—ಸಾಹಸ.

೫೪೮ ಇಳೆ—ಭೂಮಿ.

೫೪೯ ಬಸವಳಿ—ದಣಿ; ವಸಿಸು—ವಾಸಮಾಡು.

೫೫೦ ಉಲಿ—ಧ್ವನಿ, ಶಬ್ದ.

೫೫೧ ಗುಪ್ತಿ—ರಹಸ್ಯ, ಗುಟ್ಟು.

೫೫೨ ಅಹಿ—ಸರ್ಪ; ಅಸು—ಪ್ರಾಣ.

೫೫೩ ಅರುಣ—ಸೂರ್ಯ.

೫೫೪ ಉಡುರಾಜ—ಚಂದ್ರ.

೫೫೫ ಮುಂದುಪ್ಪು—ಮೊದಲು ಉಪ್ಪು; ಜೀವಕಂದೀತೆ—ಜೀವಕೆ +

ಅಂದೀತೆ ; ಅಂದೀತೆ— ಹೇಳಿ ಕಲಿಸುತ್ತದೆಯೆ ?

೫೫೬ ಏರ್ಗಲ್ಲು—ಏರುವ ಮೆಟ್ಟಲು.

೫೫೭ ಭರ—ಹೆರೆ.

೫೫೮ ಸೊದೆ—ಸುಧೆ, ಅಮೃತ.

೫೫೯ ವಲಯ—ಮಂಡಲ.

೫೬೦ ನನ್ನಿ—ಪ್ರೀತಿ.

೫೬೧ ವೈಹಾರ—ವಿಹಾರ.

೫೬೨ ತನುರುಜೆ—ದೇಹದ ರೋಗ ; ರುಜಿನ—ರೋಗ.

೫೬೩ ಉಮ್ಮಳಿಸು—ಸೆಕೆಯಿಂದ ತಪಿಸು ; ಪಿಷ್ಟ—ಹಿಟ್ಟು.

೫೬೪ ಹರ್ಮ್ಯ—ಉಪ್ಪರಿಗೆ ಮನೆ ; ಲೋಕವೇಣಿಯೊ—ಲೋಕವು + ಏಣಿಯೊ.

೫೬೫ ನೇಹ—ಸ್ನೇಹ ; ಮೃತಿ—ಮರಣ.

೫೬೬ ಪೂತ—ಪವಿತ್ರ.

೫೬೭ ರಣ—ಯುದ್ಧ ; ಗಹ್ವರ—ಕಂದಕ ; ಶುನಕ—ನಾಯಿ ; ಅನುದಿತ—ಹೇಳಲಾಗದ.

೫೬೯ ಘಾಸ—ಹುಲ್ಲು, ಆಹಾರ.

೫೭೧ ಮೃಗತೃಷ್ಣೆ—ಬಿಸಿಲ್ಗುದುರೆ ; ಸೊಗ—ಸುಖ.

೫೭೨ ಉರ—ಎದೆ.

೫೭೩ ಜಗ—ಜಗತ್ತು.

೫೭೪ ವಾಮಚರ್ಯೆ—ತಪ್ಪುನಡತೆ ; ತಾಮರಸ—ತಾವರೆ ; ಕೀಳ್—ಬುಡ ; ಶ್ಯಾಮ—ಕಪ್ಪು ; ಸಿತ—ಬಿಳುಪು.

೫೭೫ ಇಳೆ—ಭೂಮಿ.

೫೭೬ ದ್ವಂದ್ವ—ಸುಖದುಃಖ ಮೊದಲಾದ ಜೋಡಿ.

೫೭೮ ಯಮಲಾರ್ಥ—ದ್ವಂದ್ವಾರ್ಥ.

೫೭೯ ಝರಿ—ಹೊಳೆ.

೫೮೧ ಇಮ್ಮೊಗ—ಎರಡುಮುಖ ; ಒಮ್ಮೆಯ್—ಒಂದೇ ದೇಹ ; ನಿರ್ಮೂರ್ತ—ಆಕೃತಿಯಿಲ್ಲದ್ದು.

೫೮೫ ಉಚ್ಛಿಷ್ಟ—ಎಂಜಲು.

೫೮೭ ಸಂಚಿ—ಚೀಲ.

೫೮೯ ಯದೃಚ್ಛೆ—ಸ್ವಾತಂತ್ರ್ಯ.
೫೯೧ ಸುರಾವಾಟಿಕೆ—ಹೆಂಡದಂಗಡಿ.
೫೯೪ ಅಧಿಧರ್ಮ—ಲೋಕಾತೀತವಾದ ಧರ್ಮ.
೫೯೬ ಒಡಲು—ದೇಹ.
೫೯೮ ನಚ್ಚು—ನಂಬಿಕೆ.
೫೯೯ ಪ್ರಾಕೃತದ್ವಂದ್ವ—ಪ್ರಕೃತಿಯಿಂದಾದ ಸುಖದುಃಖಾದಿ ದ್ವಂದ್ವ.
೬೦೦ ದುರಿತ—ಪಾಪ ; ಮಾಳ್ಕೆ—ಕರ್ಮ ; ಇಳೆ—ಭೂಮಿ ; ಧರುಮ—ಧರ್ಮ.
೬೦೧ ಗಾಧೇಯ—ವಿಶ್ವಾಮಿತ್ರ ; ಆದಿತೇಯ—ದೇವತೆ ; ರೋಧ—ಅಡ್ಡಿ.
೬೦೨ ಬಾನ್—ಆಕಾಶ ; ಎಲರು—ಗಾಳಿ.
೬೦೩ ಸಾಜ—ಸಹಜ.
೬೦೪ ವೇದಿತೆ—ತಿಳಿವಳಿಕೆ ; ಮಾದನ—ಮಾದಕತೆ, ಮತ್ತು ; ವೇದನೆ—ಜ್ಞಾನ.
೬೦೫ ಇರ್ಕೆಲ—ಎರಡು ಪಕ್ಕ.
೬೦೬ ಕ್ಷೋಣಿ—ಭೂಮಿ.
೬೦೭ ದಷ್ಟ—ಕಚ್ಚಲ್ಪಟ್ಟ ; ಜಾಂಗುಲಿಕ—ವಿಷವೈದ್ಯ.
೬೦೮ ಅತೀತ—ಲೋಕವನ್ನು ಮೀರಿದ.
೬೦೯ ಝರಿ—ಹೊಳೆ ; ಪ್ರಾಕ್ತನ—ಹಿಂದಿನ ಜನ್ಮದ ; ಮಲೀಮಸ—ಪಾಪ ; ಆಪಗೆ—ನದಿ ; ಪ್ರತ್ಯಹ—ಪ್ರತಿದಿನ ; ಪ್ರತ್ಯಯಿಸು—ನಂಬು.
೬೧೦ ಭಾಸುರ—ಪ್ರಕಾಶವುಳ್ಳವನು.
೬೧೨ ಬದುಕು—ಜೀವನವು. (ಅವನ ವರ).
೬೧೩ ನಚ್ಚು—ನಂಬಿಕೆ.
೬೧೫ ಸಾಂಬ—ಶಿವ ; ಬಿಂಬ—ಮೂರ್ತಿ.
೬೧೬ ಐಸಿರಿ—ಐಶ್ವರ್ಯ ; ಆದರ್ಶ—ಮಾದರಿ.
೬೧೭ ಅಹಮಿನೊಳ್—ತನ್ನಲ್ಲಿ.
೬೧೯ ಮೂವರಗಳು—ಮೂರು ವರಗಳು.
೬೨೦ ಮಚ್ಚರ—ಮಾತ್ಸರ್ಯ.

೬೨೨ ಪನ್ನಗ—ಸರ್ಪ ; ಇರುಕು—ಇಕ್ಕಟ್ಟಾದ ಸ್ಥಳ.

೬೨೩ ಸ್ತೈತರಿತು—ಮೌನವಾಗಿ.

೬೨೫ ಒರ್ತ್ತನ—ಏಕಾಕಿತೆ.

೬೨೬ ಖರ್ವ—ಗಿಡ್ಡ ; ಶರ್ವರಿ—ರಾತ್ರಿ ; ಕಾಳ್—ಕತ್ತಲೆ.

೬೨೯ ಶವವಾಹಿ—ಹೆಣ ಹೊರುವವನು.

೬೩೨ ಮುಗಿಲೊಡ್ಡು—ಮೋಡಗಳ ರಾಶಿ ; ಗವಾಕ್ಷಿ—ಕಿಟಕಿ.

೬೩೩ ಅವುತಣ—ಔತಣ ; ಮತ್ತು—ಮದ.

೬೩೪ ಭಾವ್ಯ—ಭವಿಷ್ಯತ್ತು.

೬೩೬ ನಾಗರ—ಹಾವು.

೬೩೭ ಕಂತೆ—ಹೊರೆ, ಚಿಂದಿಬಟ್ಟೆ

೬೩೮ ನೆಚ್ಚದಿರು—ನಂಬಬೇಡ ; ರಚ್ಚೆ—ರಕ್ಷೆ.

೬೩೯ ಅಂದದೆ—ನಿಲುಕದೆ.

೬೪೧ ವಾಂಛೆ—ಬಯಕೆ.

೬೪೩ ಕೃಕಲಾಸ—ಓತಿಕೇತ ; ವಿಯತ್—ಆಕಾಶ.

೬೪೭ ಆತ್ಮಘಾತನೆ—ತನ್ನನ್ನು ಹಾಳುಮಾಡಿಕೊಳ್ಳುವುದು.

೬೪೭ ಅಕ್ಷಯ್ಯ—ಅಕ್ಷಯ.

೬೪೮ ಬಾಳೆಲೆ—ಬಾಳೆ ಎಲೆ ಅಥವಾ ಬಾಳ್ + ಎಲೆಬರಿದು,
ಬಾಳ್—ಜೀವನ ; ಕ್ಷರ—ನಶ್ವರ ; ಅಕ್ಷರ—ಶಾಶ್ವತ.

೬೫೦ ವಾಹಿನಿ—ನದಿ.

೬೫೧ ದಾರುಣ—ಕ್ರೌರ್ಯ ; ವಾರುಣಿ—ಮರುಳುಗೊಳಿಸುವ ಮದ್ಯ.

೬೫೩ ಇರುಳ್—ರಾತ್ರಿ.

೬೫೪ ಅಮನಸ್ಕ—ಮನೋವ್ಯಾಪಾರವಿಲ್ಲದವನು ; ವೀಥಿ—ಬೀದಿ ;
ವೀಚಿ—ಅಲೆ.

೬೫೫ ದ್ರುತತೆ —ವೇಗ.

೬೫೭ ರಸನೆ—ನಾಲಗೆ ; ಕುಕ್ಷಿ—ಹೊಟ್ಟೆ.

೬೫೯ ಸಂಚಿಕೆ—ಒಟ್ಟು ಹಾಕುವುದು, ಸಂಪಾದನೆ ; ಸನ್ನೆ—ಸಂಜ್ಞೆ.

೬೫೯ ವ್ಯಾಳ—ಸರ್ಪ ; ಅರಲ್—ಹೂ ; ಅರಲಿನ ರಸ—ಜೇನು.

೬೬೧ ಸೊಗ—ಸೊಗಸು ; ಘಟ—ಗಡಿಗೆ.

೬೬೨ ಉತ್ಕರ—ರಾಶಿ ; ಸಾಂಪ್ರತ—ಇಂದಿನ.

೧೬೫ ಭುಜಿಸಲ್ಕೆ—ಅನುಭವಿಸುವುದಕ್ಕೆ.

೧೬೬ ಉಡುಪಥ—ಆಕಾಶ.

೧೬೭ ಸ್ವಾಯತ್ತ್ರ—ಸ್ವಾಧೀನತೆ.

೧೭೦ ಮಂಥರ—ಮೆಲ್ಲಗೆ ; ದುರ್ಗ—ಕಠಿಣ.

೧೭೩ ನಾರಸತ್ತ್ವಾಯನ—ಮಾನವಶಕ್ತಿಯು ; ಆಶ್ರಯ; ದಾರು—ಮರ.

೧೭೪ ತುಂಡ—ಮುಖ ; ಅಗ್ಗಳ—ಶ್ರೇಷ್ಠ ; ಪುರುಳ್—ಸಾರವಸ್ತು.

೧೭೫ ತೊಂಡಿಲು—ಶಿರೋಭೂಷಣ ; ಬಾಳ್—ಜೀವನ.

೧೭೬ ಕ್ಷರ—ನಶ್ವರ.

೧೮೦ ಕೃಪಣೆ—ಜಿಪುಣೆ ; ಬಾಳ್—ಜೀವನ.

೧೮೩ ಪೊಡವಿ—ಭೂಮಿ.

೧೮೪ ಕಾವಡಿ—ಹೆಗಲ ಮೇಲೆ ಹೊರತಕ್ಕದ್ದಾಗಿ ಎರಡೂ ಕಡೆಗೂ ಭಾರವುಳ್ಳ ಅಡ್ಡೆ.

೧೮೪ ಪ್ರಾತರನಿಲ—ಬೆಳಗಿನ ಗಾಳಿ. ಅರುಣ—ಸೂರ್ಯ ; ನನೆ—ಮೊಗ್ಗು.

೧೮೬ ಸ್ರೋತ—ಹೊಳೆ ; ಶಾಸ್ತಿ—ಶಾಸನ.

೧೮೯ ಚಣ—ಕ್ಷಣ.

೧೯೩ ತ್ರಿದಿವ—ಸ್ವರ್ಗ ; ಮುಯ್ಯ್—ಸೆಣಸು.

೧೯೬ ಪ್ರವಾದಿ—ದೇವದೂತ, ಜ್ಞಾನಿ ; ಗೋವುರ—ಗೋಪುರ.

೧೯೭ ರುಜೆ—ರೋಗ.

೧೯೮ ಕೃಪಣತೆ—ಕೆಟ್ಟತನ ; ಫುಲ್ಲಸಮ—ಅರಳಿದ ಹೂ.

೧೯೯ ಆನ್—ನಾನು ; ಪೆಸರ್—ಹೆಸರು.

೨೦೦ ಶ್ರುತಿ—ವೇದ ; ಮತಿ—ಬುದ್ಧಿ ; ವಿರತಿ—ವೈರಾಗ್ಯ ; ಸ್ವತೆ—ತಾನೆಂಬ ಭಾವ ; ಪರತೆ—ಅನ್ಯನೆಂಬ ಭಾವ.

೨೦೧ ಒಡಲು—ದೇಹ ; ಮಜ್ಜನ—ಸ್ನಾನ.

೨೦೩ ಬವರ—ಸಮರ, ಜಗಳ.

೨೦೫ ನಿಯತಿ—ಗೊತ್ತಾದ ಕ್ರಮ, ನಿಯಮ.

೨೦೬ ಸೌತ್ಯ—ಸೂತನ ಕೆಲಸ, ಸಾರಥ್ಯ ; ವಾಗೆ—ಲಗಾಮು.

೨೦೭ ಮಸ್ತಕ—ಶಿರಸ್ಸು ; ಸಾನು—ಬೆಟ್ಟದ ತಪ್ಪಲು ; ತಂಗಿ—ನೆಲೆಸಿ ; ಮೃತ್—ಮಣ್ಣು ; ಶಿಲೆ—ಕಲ್ಲು.

೭೦೮ ವಿಶದ—ಸ್ಪಷ್ಟ, ಕಾಣಿಸತಕ್ಕ ; ಲೀನ—ಅಡಗಿದ, ಕಾಣಿಸದೆ ಇರತಕ್ಕ; ಐಸಿರಿ—ಐಶ್ವರ್ಯ ; ಘಾಸಿ—ಆಯಾಸ.

೭೦೯ ಕುಸುಮ—ಹೂ ; ರಸನೆ—ನಾಲಗೆ.

೭೧೧ ಆದರ—ಗೌರವ.

೭೧೨ ಜಲಧಿ—ಸಮುದ್ರ ; ನಭ—ಆಕಾಶ.

೭೧೪ ನಿರ್ವಿಣ್ಣತೆ—ನಿರಾಸೆ.

೭೧೫ ರಕ್ತ—ಅನುರಕ್ತ ; ಉಜ್ಜುಗ—ಉದ್ಯೋಗ ; ರಿಕ್ತ—ಶೂನ್ಯ.

೭೧೬ ಬಿತ್ತು—ಬೀಜ.

೭೨೦ ಸೊಗ—ಸುಖ ; ದುಗುಡ—ದುಃಖ.

೭೨೪ ಅರಿ—ವೈರಿ.

೭೨೬ ತಾಳುಮೆ—ತಾಳ್ಮೆ.

೭೩೦ ಅರಿವೀವ—ಅರಿವನ್ನು ಕೊಡುವ.

೭೩೩ ಸುಮ—ಹೂ ; ಉಂಬಳಿ—ಜಹಗೀರು, ಮಾನ್ಯವಾಗಿ ಕೊಟ್ಟ ಆಸ್ತಿ; ಸದರ—ಸುಲಭ.

೭೩೪ ಅಸ್ತಿತ್ವ—ಇರುವಿಕೆ.

೭೩೬ ಗ್ರಂಥಿ—ಗಂಟು ; ಮಗುಳೆ—ಮತ್ತೆ, ತಿರುಗಿ.

೭೩೭ ಮೆಟ್ಟುಶಿಲೆ—ತುಳಿಯುವ ಕಲ್ಲು ; ಓರೊಂಟಿ—ಒಂಟಿಗ ; ಮಾರಕ—ನಾಶಕ.

೭೩೮ ಸಮಿಧೆ—ಸೌದೆ ; ಲಗ್ನ—ಸಂಬಂಧ ; ವಿಭಿನ್ನತ—ಬೇರೆಯಾದವ.

೭೪೦ ಪಡು—ಅನುಭವಿಸು.

೭೪೨ ಸೊದೆ—ಸುಧೆ, ಅಮೃತ ; ಬಿದಿ—ವಿಧಿ.

೭೪೪ ಕಾಕುತ್ಸ್ಥ—ಶ್ರೀರಾಮ ; ಗೋಕುಲೇಶ—ಶ್ರೀಕೃಷ್ಣ ; ಅಹಮ—ಅಹಂಕಾರವನ್ನು.

೭೪೫ ದುರಿತ—ಪಾಪ, ಕೆಟ್ಟದ್ದು.

೭೪೭ ಸಾಜ—ಸಹಜ.

೭೪೯ ಹೇತು—ಕಾರಣ ; ಕರ್ತೃ—ಸೃಷ್ಟಿಮಾಡಿದವನು.

೭೫೦ ದ್ವಂದ್ವ—ವಿರುದ್ಧವಾದ ಜೋಡಿ.

೭೫೧ ಬಾಳ್—ಜೀವನ.

೭೫೨ ಕಾಯ—ದೇಹ.

೭೫೩ ರಸ—ಸಿಹಿ ಮೊದಲಾದ ರಸ ; ಅಸಮ—ಬೇರೆಬೇರೆ.

೭೫೪ ರುಂದ್ರ—ದಟ್ಟವಾದ, ವಿಸ್ತಾರವಾದ ; ಬಂಧುರತೆ—ಸುಂದರತೆ.

೭೫೫ ಜ್ವಲನ—ಬೆಂಕಿ.

೭೫೬ ಔಪಮ್ಯ—ಹೋಲಿಕೆ ; ಆಪಾತ—ಹೊರನೋಟ, ಮೇಲ್ಗಡೆ ;
ಸೋಪಾಧಿಕ—ಉಪಾಧಿಸಹಿತ, ಕಾರಣಾಂತರಸಹಿತ.

೭೫೭ ನಾರಿಕೇಳ—ತೆಂಗು ; ಸ್ವೈರ—ಸ್ವೇಚ್ಛೆಯಿಂದ ನಡೆಯುವ.

೭೫೮ ಕುಹರ—ಗವಿ

೭೫೯ ಉಸಬು—ಮರಳು.

೭೬೦ ವಕ್ತ್ರ—ಮುಖ ; ಅಕ್ಷಿ—ಕಣ್ಣು ; ಮರ್ತ್ಯ—ಮನುಷ್ಯ ;
ಪೃಥ್ವೀಚಿ—ಸೀತೆ.

೭೬೧ ಐಕ್ಯಜ್ಞ—ಸರ್ವವೂ ಬ್ರಹ್ಮವೆಂದು ತಿಳಿದವನು ;
ಏಗಳುಂ—ಯಾವಾಗಲೂ.

೭೬೩ ಹಗೆ—ವೈರ ; ಹೋಗೊಡಬೇಕು—ಹೋಗಲು ಬಿಡಬೇಕು.

೭೬೪ ಸಾಹ್ಯ—ಸಹಾಯ.

೭೬೫ ದಂದುಗ—ಕಷ್ಟ.

೭೬೭ ಸ್ವಾಂತ—ಮನಸ್ಸು ; ಗ್ರಂಥಿ—ಗಂಟು.

೭೬೮ ಹಗೆ—ವೈರಿ ; ಕೆಳೆ—ಸ್ನೇಹಿತ.

೭೭೦ ಅಬ್ಬೆ—ಅಮ್ಮ ; ಉಬ್ಬೆಗ—ದುಃಖ.

೭೭೧ ಮಹಿ—ಭೂಮಿ ; ಚೌರ್ಯ—ಕಳ್ಳತನ.

೭೭೨ ತನು—ದೇಹ ; ಒಳಿತ—ಒಳ್ಳೆಯದು.

೭೭೩ ಅನಿಲ—ಗಾಳಿ.

೭೭೪ ತಂದೆ—ತನ್ನದೆ.

೭೭೫ ವಾಯ—ತಳಹದಿ (foundation) ; ಆಗಾರ—ಮನೆ ;
ಸೊಡರು—ದೀಪ ; ತಥ್ಯ—ಸತ್ಯ.

೭೭೬ ಸಮ್ಮತಿ—ಸಮಾಧಾನ ; ತಥ್ಯ—ಸತ್ಯ.

೭೭೭ ತೀರ—ಅತಿಶಯವಾಗಿ.

೭೭೯ ಕಪ್ಪುರ—ಕರ್ಪೂರ ; ವಿಶದ—ಸ್ಪಷ್ಟ.

೭೮೦ ಕಮನಕಾರಣಿ—ಆಸೆಯನ್ನು ಹುಟ್ಟಿಸುವ.

೭೮೧ ಟಂಕಕ—ಮುದ್ರೆಯೊತ್ತಿದ ನಾಣ್ಯ, ನಾಣ್ಯದ ಅಚ್ಚು ;

ಅನುಪಮ—ಹೋಲಿಕೆಯಿಲ್ಲದ್ದು.

೭೮೨ ಪುರುಳು—ವಸ್ತು.

೭೮೫ ಇಳೆ—ಭೂಮಿ ; ಸುಕೃತ—ಪುಣ್ಯ, ಧನ್ಯತೆ.

೭೮೮ ಕಡಲು—ಸಮುದ್ರ.

೭೯೦ ಒಪ್ಪು—ಒಪ್ಪಿಗೆ.

೭೯೧ ಬಿಡುಗೊಳದ—ತೆರಪಿಲ್ಲದ ; ಅಡಿಗಡು—ಕೆಳಗಿನ ಗಡಿ.

೭೯೨ ಗರುವ—ಗರ್ವ, ಅಹಂಕಾರ.

೭೦೩ ಬಚ್ಚು—ಅಡಗಿಸು, ಮರೆಮಾಡು.

೭೯೪ ಪೆಣಲ್—ಹೆರಳು, ಜಡೆ ; ಪಾಶ—ಹಗ್ಗ.

೭೯೬ ಕೃಷ್ಣಶಿಲೆ—ಕಪ್ಪುಶಿಲೆ ; ಜಕ್ಕ—ಜಕ್ಕಣಾಚಾರಿಯೆಂಬ ಶಿಲ್ಪಿ, ಬೇಲೂರು ಚೆನ್ನಕೇಶವಮೂರ್ತಿಯನ್ನು ಕೆತ್ತಿದವನು.

೭೯೭ ರವಿ—ಸೂರ್ಯ ; ಸಲಿಲ—ನೀರು ; ಊರ್ಮಿ—ಅಲೆ ; ದೀವಿ—ದೀಪದ ಹಣತೆ ; ಸೊದೆ—ಸುಧೆ, ಅಮೃತ ; ಆತುಮ—ಆತ್ಮ.

೭೯೮ ಶ್ರುತಿ—ವೇದ ; ಪ್ರತಿಕರ್ಮ—ಅಲಂಕಾರ ; ಸ್ಥಗಿತ—ಇರತಕ್ಕ, ನೆಲೆಸಿರುವ.

೭೯೯ ಊಷ್ಮ—ಕಾವು ; ಕರಣ—ಇಂದ್ರಿಯ ; ಧ್ವನನ—ಧ್ವನಿ, ವ್ಯಂಜನಾ.

೮೦೧ ಸ್ಪರ್ಶವೇದಿ—ಮುಟ್ಟಿದರೆ ಚಿನ್ನ ಮಾಡುವ ಕಲ್ಲು ; ಛವಿ—ಕಾಂತಿ.

೮೦೩ ಸ್ರವಂತಿ—ನದಿ ; ದ್ವೀಪಿಕಾ—ದ್ವೀಪ.

೮೦೪ ಪ್ರಚರ—ದಾರಿ.

೮೦೫ ಸುರೆ—ಮದ್ಯ (ಅಮೃತ).

# ಪರಿಶಿಷ್ಟದ ಅರ್ಥ

೧ ಮಬ್ಬು—ಕತ್ತಲೆ ; ಪೋರು—ಹೋರಾಡು ; ಅಂತಕ—ಯಮ.

೨ ಧೀ—ಬುದ್ಧಿ ; ವಿತರ್ಕ—ಊಹೆ, ಯುಕ್ತಿ ; ಉಳುಮೆ—ಕೃಷಿ.

೪ ಜೀವನಭರಣ—ಹೊಟ್ಟೆ ತುಂಬಿಕೊಳ್ಳುವುದು ; ಒಬ್ಬ (ಪರಮಾತ್ಮ.)

೬ ಅಮೇಯ—ಅಜ್ಞೇಯ, ಅಳತೆಗೆ ನಿಲುಕದ್ದು.

೭ ಬಿತ್ತು—ಬೀಜ.

೮ ಎಂತಾನುಂ—ಹೇಗಾದರೂ.

೯ ನಾವೆ—ಹಡಗು.

೧೦ ಜೀವನ—ಬದುಕುವ ಸಾಧನ.

೧೨ ನಿಕ್ಕುವ—ನಿಶ್ಚಯ ; ದುಕ್ಕ—ದುಃಖ ; ಬಿಕ್ಕು—ಉಗ್ಗು, ತೊದಲು.

೧೩ ವಿದಿತ—ತಿಳಿದದ್ದು, ಜ್ಞಾತ ; ಸಗ್ಗ—ಸ್ವರ್ಗ ;
ವಿಧಮಿಪುದು—ಸುಟ್ಟುಹಾಕುವುದು.

೧೫ ಇಡುಕು—ತುಂಬು ; ಸೌರಭ—ಸುವಾಸನೆ.

೧೬ ಪುಸಿ—ಸುಳ್ಳಾದ ; ನಿಸದ—ನಿಶ್ಚಯ, ಸತ್ಯ ; ಮುಸುಕು—ಮರೆ ; ಮುಸುಕು ಬಾಳ್ಕೆ—ಅಂತರಂಗದ ನಿಶ್ಚಯವನ್ನು ತೋರಗೊಡದ ಜೀವನ.

೧೭ ಸಾಮಯಿಕ—ಸಮಯಕ್ಕೆ ಅನುಗುಣವಾದ ; ಧೀಮಂತ—ಜಾಣ.

೧೮ ಕೋಲ್—ಅವಲಂಬನವಾದ ಕೋಲು ; ಭವಜಲಧಿ—ಸಂಸಾರ ಸಾಗರ.

# ಟಿಪ್ಪಣಿ

## (ಸಂಖ್ಯೆಗಳು ಪದಗಳವು)

೧೩೬. 'ಹಂಸೆ ಜೀವನದ ಪಾಲ್ನೀರಭೇದದಲಿ' ಹಾಲು ನೀರನ್ನು ಬೆರಸಿಟ್ಟರೆ ಹಂಸಪಕ್ಷಿ ಹಾಲನ್ನು ಕುಡಿದು ನೀರನ್ನು ಬೇರ್ಪಡಿಸಿ ಬಿಟ್ಟಿರುವುದಂತೆ. ಇದು ಹಂಸಕ್ಷೀರ ನ್ಯಾಯ.

೧೪೭. ಅಸ್ತಿ, ಭಾತಿ, ಪ್ರಿಯ, ನಾಮ, ರೂಪ—ಇವೈದು ಜೀವ ಲಕ್ಷಣಗಳು. ಅಸ್ತಿ—ಸತ್, ಭಾತಿ—ಚಿತ್, ಪ್ರಿಯ—ಆನಂದ ಈ ಮೂರು ಬ್ರಹ್ಮಲಕ್ಷಣಗಳು. ನಾಮರೂಪಗಳೆರಡೂ ಮಾಯಾಜನ್ಯವಾದವು.

೧೬೦. ಶ್ರೀ ಶೇಷಣ್ಣನವರು ಸುಪ್ರಸಿದ್ಧರಾದ ವೈಣಿಕರು. 'ವೀಣೆ ಶೇಷಣ್ಣ' ಎಂದೇ ಇವರ ಖ್ಯಾತಿ. ಇವರು ಮೈಸೂರು ಮಹಾರಾಜರ ಆಸ್ಥಾನದಲ್ಲಿ ವಿದ್ವಾಂಸರಾಗಿದ್ದರು.

೨೭೯. ಶ್ರೀಮದ್ರಾಮಾನುಜರು ವಿಶಿಷ್ಟಾದ್ವೈತದ ಆಚಾರ್ಯರು. ಇವರು ನೆಲೆಸಿದ್ದ ಕುಟೀರದ ಹೊರಗೆ ಶಿಷ್ಯನೊಬ್ಬನು ಬಂದು ಬಾಗಿಲು ಬಡಿದನಂತೆ. 'ಯಾರು ನೀನು ?' ಎಂದು ಆಚಾರ್ಯರು ಪ್ರಶ್ನಿಸಲಾಗಿ 'ನಾನು, ನಾನು' ಎಂದು ಶಿಷ್ಯನು ಹೇಳಿದನು. ಆಗ ಆಚಾರ್ಯರು 'ಮಗು ಒಳಗೆ ಬಾ, ಆದರೆ ನೀನು ನನ್ನೊಡನೆ ಬರುವುದು ''ನಾನು'' ಸತ್ತಮೇಲೆ ಮಾತ್ರ' ಎಂದರು. ನಾನು ಎಂದರೆ ಅಹಂಕಾರ. ಅಹಂಕಾರವಳಿದರೆ ಮಾತ್ರ ಗುರುವಿನ ಲಾಭವಾಗುತ್ತದೆ. ಅದರಿಂದ ಸದ್ಗತಿ ದೊರೆಯುತ್ತದೆ—ಎಂದು ಅಭಿಪ್ರಾಯ.

೨೯೭. ಕಾಗೆಗೆ ಎರಡು ಕಣ್ಣುಗಳಿದ್ದರೂ ನೋಡುವ ಶಕ್ತಿಯಿರುವುದು ಒಂದು ಕಣ್ಣುಗುಡ್ಡೆಗೆ ಮಾತ್ರ. ಕಾಗೆ ಎಡಬಲಗಳಿಗೆ ನೋಡುವಾಗ ಈ ಕಣ್ಣುಗುಡ್ಡೆ ಎಡಬಲಗಳಿಗೆ ಸರಿದಾಡುವುದೆಂದು ನಂಬಿಕೆ ಇದೆ. ಇದನ್ನು ಕಾಕಾಕ್ಷಿಗೋಳಕ ನ್ಯಾಯ ಎಂದು ಹೆಸರು.

೪೪೩. ದೇವದಾನವರು ಸೇರಿ ಕ್ಷೀರಸಮುದ್ರವನ್ನು ಕಡೆದರಷ್ಟೆ : ಅದರಿಂದ ಸುರೆ, ಅಮೃತ, ವಿಷ—ಈ ಮೂರು ಹುಟ್ಟಿದವು ; ಕಡೆಯುವುದಕ್ಕೆ ಮೊದಲು ಇವು ಮೂರು ಕ್ಷೀರಸಮುದ್ರದಲ್ಲಿ ಒಂದುಗೂಡಿದ್ದವು.

ಸುರೆಯೊಡನೆ ಅಮೃತವಿಷಗಳೂ ಅಮೃತದೊಡನೆ ಸುರೆವಿಷಗಳೂ ವಿಷದೊಡನೆ ಅಮೃತಸುರೆಗಳೂ ಸಂಮಿಶ್ರವಾಗಿದ್ದವು.

೪೪೪. ಹೆಣ್ಣುಸರ್ಪ ಮೊಟ್ಟೆಗಳನ್ನಿಡುತ್ತ ಹೋಗುತ್ತದೆ. ಅನಂತರ ತುಂಬ ಹಸಿವಾಗುವುದರಿಂದ ತನ್ನ ಮೊಟ್ಟೆಗಳನ್ನು ತಾನೇ ತಿಂದುಬಿಡುತ್ತದೆ. ಬಿಟ್ಟುಹೋದ ಒಂದೆರಡು ಮೊಟ್ಟೆಗಳಿಂದ ಹಾವಿನ ಕುಲ ಬೆಳೆಯುತ್ತದೆ.

೪೭೪. ಇಲ್ಲಿ ದ್ರೌಪದೀವಸ್ತ್ರಾಪಹರಣದ ಪ್ರಸ್ತಾವ ಇದೆ. ದುಃಶಾಸನ ಅವಳ ಸೀರೆಯನ್ನು ಸೆಳೆಸೆಳೆದು ಹಾಕಿದರೂ ಶ್ರೀಕೃಷ್ಣನ ಕೃಪೆಯಿಂದ ಸೀರೆ ಅಕ್ಷಯವಾಯಿತು. ದುಃಶಾಸನ ಸೋತು ಸುಮ್ಮನಾದ.

೪೯೫. ಸಾಕ್ರೆಟಿಸ್ಸನು ಗ್ರೀಕ್ ದೇಶದಲ್ಲಿ ವಿಖ್ಯಾತನಾದ ತತ್ತ್ವಜ್ಞಾನಿ. ಏಸು ಎಂದರೆ ಕ್ರಿಸ್ತ. ಮೋಸಸ್ ಎಂಬುವನು ಬೈಬಲ್ಲಿನಲ್ಲಿ ಪ್ರಸಿದ್ಧನಾದ ಸಂತ. ಮಹಮ್ಮದನು ಇಸ್ಲಾಂ ಮತದ ಸ್ಥಾಪಕ.

೫೦೩. ಲ್ಯುಕ್ರೀಷಸ್ (Lucretius) ಎಂಬಾತನು ಸುಮಾರು ಕ್ರಿ.ಪೂ. ೯೬–೫೫ರಲ್ಲಿ ಇದ್ದ ಲ್ಯಾಟಿನ್ ಕವಿ. ಎಪಿಕ್ಯೂರಸ್ ತತ್ತ್ವಜ್ಞಾನ ಪಂಥಕ್ಕೆ ಸೇರಿದವನು. ಆ ಪಂಥದ ವಿಚಾರಧಾರೆಯನ್ನು ತಿಳಿಸುವುದು ಲ್ಯುಕ್ರೀಷಸ್‌ನ De Rerum Natura ವಸ್ತು ಸ್ವಭಾವ ಅಥವಾ ಜಗತ್ಸ್ವಭಾವ ಎಂಬ ಪದ್ಯ ಕಾವ್ಯ.

“ಈ ಜಗತ್ತು ಕೇವಲ ಪರಮಾಣುಗಳ ಸಂಯೋಗ–ವಿಯೋಗಾದಿ ನಾನಾ ವಿಕಾರ ಪರಿಣಾಮಗಳಿಂದ ಉಂಟಾದದ್ದು. ಇದಕ್ಕೆ ಬೇರೆ ನಿಯಾಮಕನು ಯಾರೂ ಇರುವಂತಿಲ್ಲ. ಮನುಷ್ಯನು ಸಾಧಿಸಬಹುದಾದದ್ದೂ ಬಹು ಸ್ವಲ್ಪ. ಅವನ ಬುದ್ಧಿವಂತಿಕೆಯೇನಿದ್ದರೂ ಬಂದದ್ದನ್ನು ಸಹಿಸಿಕೊಂಡು ಶಾಂತಚಿತ್ತನಾಗಿರುವುದರಲ್ಲಿ. ಭೋಗವನ್ನು ಜೀವನದ ಪರಮಾರ್ಥವನ್ನಾಗಿ ಮಾಡಿಕೊಳ್ಳತಕ್ಕದ್ದಲ್ಲ. ನಾವು ಹುಡುಕಬೇಕಾದದ್ದು ಭೋಗವನ್ನಲ್ಲ; ಸಮಾಧಾನವನ್ನು. ಇದಕ್ಕಾಗಿ ಅತ್ಯಾಶೆಗಳನ್ನು ಅದುಮಬೇಕು. ರಾಗಾವೇಶಗಳನ್ನೂ ತಡೆಯಬೇಕು. ಕ್ಷುದ್ರದೈವಗಳ ಭೀತಿಯನ್ನು ನೀಗಬೇಕು. ಇಂದ್ರಿಯ ಸಂಯಮ, ಲಬ್ಧ ಸಂತೃಪ್ತಿ, ವಿರಕ್ತಭಾವ ಇದರಿಂದಲೇ ನಿಜವಾದ ಸುಖ”—ಇದು ಲ್ಯುಕ್ರೀಷಸ್‌ನ ಬೋಧೆ.

ನ್ಯಕ್ಕೃತಾಕ್ಷಿಯುವಾದ ನ್ಯಕ್ಕೃತ ಕೆಳಗೆ (ಪಾದದಲ್ಲಿ) ಇರುವ ಕಣ್ಣು ಯಾರಿಗೋ ಅವನು ನ್ಯಕ್ಕೃತಾಕ್ಷಿ. ಅಕ್ಷಪಾದನೆಂಬ ಅಭಿಪ್ರಾಯ. ಈತನು ನ್ಯಾಯಶಾಸ್ತ್ರವನ್ನು ರಚಿಸಿದ ಗೌತಮಮಹರ್ಷಿ. ಲ್ಯುಕ್ರೀಷಸ್ಸಿನ ಸಿದ್ಧಾಂತ

ದಂತೆ ನ್ಯಾಯಶಾಸ್ತ್ರವು ಪರಮಾಣುವಾದವನ್ನು ಮುಂದಿಡುತ್ತದೆ. ಆದರೆ ಜೀವಾತ್ಮ ಪರಮಾತ್ಮರನ್ನು ನ್ಯಾಯಶಾಸ್ತ್ರ ಅಂಗೀಕರಿಸುತ್ತದೆ. ಈ ಆತ್ಮಾಸ್ತಿತ್ವವನ್ನು ತೆಗೆದುಹಾಕಿದರೆ ಅದು ಲ್ಯುಕ್ರೀಷಸ್ಸಿನ ವಾದವೇ ಆಗುತ್ತದೆ. ಸಾಕ್ರಟಿಸ್ ಎಂಬ ಗ್ರೀಕ್ ತತ್ತ್ವಜ್ಞಾನಿ ಅಮರನಾದ ಆತ್ಮನನ್ನು ಅಂಗೀಕರಿಸುತ್ತಾನೆ.

೬೦೧. ವಿಶ್ವಾಮಿತ್ರನು ಘೋರ ತಪಸ್ಸಿನಲ್ಲಿ ನಿಂತಾಗ ದೇವೇಂದ್ರನು ತಪಸ್ಸನ್ನು ಕೆಡಿಸುವುದಕ್ಕಾಗಿ ಮೇನಕೆ ಮೊದಲಾದ ಅಪ್ಸರೆಯರನ್ನು ಕಳಿಸಿದ. ದೇವತೆಗಳೆಲ್ಲರೂ ಸೇರಿ ಮಾಡಿದ ಕೆಲಸ ಇದು. ಈ ಕಥೆ ವಾಲ್ಮೀಕಿ ರಾಮಾಯಣದ ಬಾಲಕಾಂಡದಲ್ಲಿದೆ.

೬೧೧. ಶ್ರೀರಾಮಚಂದ್ರನು ನೀತಿನಿಷ್ಠನಾದ್ದರಿಂದ ರಾವಣನನ್ನು ಜಯಿಸಿ ಸೀತೆಯನ್ನು ಪಡೆದನು. ಆದರೆ ಅವನ ದುಡುಕಿನ ಮಾತಿನಿಂದ ಸೀತೆ ಅಗ್ನಿಪ್ರವೇಶ ಮಾಡಬೇಕಾಗಿ ಬಂದಿತು. ಶ್ರೀರಾಮನ ನೀತಿನಿಷ್ಠೆಗೆ ಸ್ವಲ್ಪ ಕೊರತೆಯಾಯಿತೆಂಬ ಧ್ವನಿ ಇಲ್ಲಿ ಕಂಡುಬರುತ್ತದೆ.

೬೧೬. ಶ್ರೀರಾಮನು ತನಗೆ ದೊರಕಬೇಕಾಗಿದ್ದ ಕೋಸಲ ರಾಜ್ಯದ ಐಶ್ವರ್ಯವನ್ನು ಭರತನಿಗೆ ಕೊಟ್ಟು ಅರಣ್ಯಕ್ಕೆ ಹೋದನು. ಅಲ್ಲಿ ತನ್ನ ಮಡದಿ ಸೀತಾದೇವಿಯನ್ನು ರಾವಣನು ಅಪಹರಿಸಿಕೊಂಡು ಹೋದಾಗ ಅವನು ಲಂಕೆಗೆ ಹೋಗಿ ತಪ್ಪುಗಾರನಾದ ರಾವಣನನ್ನು ಸಂಹರಿಸಿದನು. ಈ ಪ್ರಸಂಗ ಇಲ್ಲಿ ಸೂಚಿತವಾಗಿದೆ.

# ಪದ್ಯಾರಂಭದ ಅಕಾರಾದಿ

## (ಇದರಲ್ಲಿ 'ಪರಿಶಿಷ್ಟ' ಸೇರಿಲ್ಲ)

### ಅ

# ಮರುಳ ಮುನಿಯನ ಕಗ್ಗ
## ('ಮಂಕುತಿಮ್ಮನ ಕಗ್ಗ'–ಭಾಗ ೨)

ಒಂದೊಂದು ಪದ್ಯವೂ ವೇದದ ಒಂದೊಂದು ಋಕ್ ಇದ್ದಂತೆ. ಅದರೊಳಗೆ ಒಂದು ಗ್ರಂಥಕ್ಕೆ ಸಾಲುವಷ್ಟು ವಿಷಯವನ್ನು ಬಚ್ಚಿಟ್ಟಿರುತ್ತಾರೆ ಡಿವಿಜಿ. ಸೌಮನಸ್ಯದ ಅವರ ನವುರು ಹಾಸ್ಯ ಅಲ್ಲಲ್ಲಿ ಇಣುಕುತ್ತದೆ. ಗಟ್ಟಿಯಾದ ಚಿಂತನೆಯ ಫಲವತ್ತಾದ ಮನಸ್ಸಿನ ಹೊಲದಲ್ಲಿ ಹುಟ್ಟಿದ ಈ ಹೊಸ ಕಗ್ಗ ಡಿವಿಜಿಯವರ ವಿಶಿಷ್ಟ ಕೊಡುಗೆ. ಇಡೀ ಗ್ರಂಥವನ್ನು ಒಟ್ಟಾಗಿ ಓದುವುದಲ್ಲ, ಬಿಡಿಬಿಡಿಯಾಗಿ ಒಂದೆರಡು ಕಗ್ಗಗಳನ್ನಷ್ಟೇ ಓದಿ ಮನಸ್ಸಿನೊಳಗೆ ಮೆಲುಕು ಹಾಕಬೇಕು. ಈ ಸಾಲುಗಳಲ್ಲಿರುವ ಜೀವನದ ಅನುಭವವನ್ನು ನಮ್ಮ ಸ್ವಾನುಭವದೊಡನೆ ತೂಗಿ ನೋಡಬೇಕು. ಸಂತೋಷದಲ್ಲಿರುವಾಗಲೂ ಇವನ್ನು ಆಸ್ವಾದಿಸಬಹುದು. ಸಂಕಟದಲ್ಲೂ ಓದಿ ಧೈರ್ಯ ತಾಳಬಹುದು. ಸರ್ವಜ್ಞನ ಹಾಡುಗಳಂತೆ ಇವು ಜನರ ಬಾಯಲ್ಲಿ ಓಡಾಡುವ, ಜೀವ ತಳೆಯುವ ಒಂದು ದಿವ ಬಂದೇ ಬರುತ್ತದೆ.

— ಕು. ಶಿ. ಹರಿದಾಸಭಟ್ಟ

### ಇತ್ತೀಚಿನ ಪ್ರಕಟಣೆಗಳು

| | |
|---|---|
| ಮಂಕುತಿಮ್ಮನ ಕಗ್ಗ | ರೂ. 50 |
| ಗೀತಾತಾತ್ಪರ್ಯ ಅಥವಾ ಜೀವನಧರ್ಮಯೋಗ | ರೂ. 280 |
| ಅನ್ತಃಪುರಗೀತೆ | ರೂ. 60 |
| ಶೃಂಗಾರಮಂಗಳಂ | ರೂ. 40 |
| ಉಮರನ ಒಸಗೆ | ರೂ. 40 |
| ಜೀವನ ಸೌಂದರ್ಯ ಸಾಹಿತ್ಯ | ರೂ. 60 |



ಕಾವ್ಯಾಲಯ : ಪ್ರಕಾಶಕರು : ಮೈಸೂರು 14

ಬೆಲೆ : ರೂ. 50